# ನಾರದಲೀಲಾ

(ನಾಟಕ)

ಲೇಖಕ

**G. V. RAMASWAMIENGAR**

*Vontikoppal, Mysore*



MYSORE

PRINTED AT THE G.T.A. PRESS

1927



**ಬೆಲೆ 10 ಆಣೆ**

# ಮುನ್ನುಡಿ

ಮ॥ ರಾ॥ ಜಿ. ವಿ. ರಾಮಸ್ವಾಮಿ ಅಯ್ಯಂಗಾರ್ಯರವರು ರಚಿಸಿರುವ "ನಾರದ ಲೀಲಾ" ಎಂಬ ನಾಟಕವನ್ನು ನೋಡಿರುತ್ತೇನೆ. ಇದರಲ್ಲಿ ಅನೇಕ ಯುಕ್ತಿ ಯುಕ್ತವಾದ ಮತ್ತು ರಸಭರಿತನಾದ ಸಂವಿಧಾನಗಳು ಅಡಗಿವೆ. ಪ್ರಕೃತ ಈ ದೇಶದಲ್ಲಿ ವಾಸಮಾಡುವ ಜನರಲ್ಲಿ ಅನೇಕ ಪಂಗಡಗಳಿವೆ ಎಂಬುವ ವಿಷಯು ಸರ್ವರಿಗೂ ತಿಳಿದದ್ದಾಗಿದೆ ಮತ್ತು ಈ ಪಂಗಡಗಳಲ್ಲಿ ಸೌಹಾರ್ದವು ಕಡಮೆಯಾಗಿ ಆಯಾ ಪಂಗಡದವರು ಇತರ ಪಂಗಡಗಳವರನ್ನು ಹೀಯಾಳಿಸುವುದೂ, ದೂಷಿಸುವುದೂ ಅನೇಕವಾಗಿ ಕಂಡುಬರುತ್ತಿದೆ. ಇದು ಶೋಚನೀಯವಾದ ವಿಷಯ. ಈ ನಾಟಕದ ಕೊನೆಯಲ್ಲಿ ಊರ್ವಶಿಯು ನಾರದನನ್ನು ಕುರಿತು "ಇಷ್ಟು ಲೀಲೆಗಳನ್ನು ತಾವು ನಡಸಿದ್ದು ಏತಕ್ಕಾಗಿ?" ಎಂದು ಪ್ರಶ್ನೆಮಾಡಿದ್ದಕ್ಕೆ ನಾರದನು ಕೊಟ್ಟ ಉತ್ತರವನ್ನು ಎಲ್ಲರೂ ಏಕಮನಸ್ಸಿನಿಂದ ಅಂಗೀಕರಿಸತಕ್ಕದ್ದಾಗಿದೆ: "ಹರಿಗೂ ಹರನಿಗೂ ಇರುವ ಹೆಚ್ಚಾದ ಸಂಬಂಧವನ್ನು ಲೋಕಕ್ಕೆ ತಿಳಿಸುವುದಕ್ಕಾಗಿ; ಶಿವಭಕ್ತರೂ ವಿಷ್ಣುಭಕ್ತರೂ ಮುಂದೆಯಾದರೂ ಮೈತ್ರಿಯನ್ನು ಪಡೆದು ಸಹೋದರರಂತಿದ್ದು ಐಕಮತ್ಯದಿಂದ ಲೋಕಕ್ಕೆ ಮಂಗಳವನ್ನು ಉಂಟುಮಾಡುವ ಬುದ್ಧಿಯನ್ನು ಹೊಂದಲೀ—ಎಂಬುದಕ್ಕಾಗಿ!"

ಬೆಂಗಳೂರು,
ತಾ॥ 7-11-1927.

ಎಂ. ಶಾಮರಾವ್.

॥ ಶ್ರೀಃ ॥

# ನಾ ರ ದ ಲೀ ಲಾ

## ಪ್ರ ಥ ಮಾಂ ಕ.

**ಪ್ರವೇಶ 1** [ಮಾರ್ಗದಲ್ಲಿ]

ನಾರದ—(ಮಂಗಳವನ್ನು ಪಾಡಿ) ತ್ರೀನಾಥ, ಇದೇನಿದೀವಿಚಿತ್ರ ! ಎಲ್ಲಿಲ್ಲಿ ನೋಡಿದರೂ ಲೀಲೆ-ಲೀಲೆ-ಲೀಲೆ ! ಆ ವೈಕುಂಠದಲ್ಲಿ ವಿಷ್ಣುಲೀಲೆ ! ಕೈಲಾಸದಲ್ಲಿ ಶಿವಲೀಲೆ ! ಸತ್ಯಲೋಕದಲ್ಲಿ ನೋಡಿದರೆ ನಮ್ಮ ತೀರ್ಥರೂಪರವರ ಲೀಲೆ ! ಇವುಗಳನ್ನುಳಿದು ಭೂಲೋಕಕ್ಕೆ ಬಂದು ನೋಡಿದರೋ—ಮನೆಮನೆಯಲ್ಲಿಯೂ ಕೃಷ್ಣಲೀಲೆ ! ಹೀಗಾದರೆ ನನ್ನಗತಿಯೇನು ? ನನಗೆ ಲೀಲೆಯೇ ಬೇಡವೆ ? ಇರಲಿ ; ಈ ತ್ರಿಮೂರ್ತಿಮಹಾಶಯರನ್ನೇ ನನ್ನ ನಾರದ ಮಂತ್ರದಿಂದ ಬಿಗಿದು ಕಟ್ಟಿ ಮನಸ್ವೀ ನೃತ್ಯಮಾಡಿಸಿ ನನ್ನ ಲೀಲೆಯನ್ನು ಪ್ರಕಟಗೊಳಿಸುವೆನು. ಆದರೆ ಈಗ ನನ್ನ ಲೀಲೆಯನ್ನು ಪ್ರಾರಂಭಿಸುವ ಬಗೆ ಹೇಗೆ ? ಮುಖ್ಯನಾಗಿ ಇಷ್ಟೇ ನನ್ನ ಅಪೇಕ್ಷೆ :—ಬಹು ಅಟ್ಟಹಾಸದಿಂದ ವಿರಾಜಿಸುತ್ತಿರುವ ಈ ತ್ರಿಮೂರ್ತಿಗಳಿಗೆ ಹೇಗಾದರೂ ಮಾಡಿ ಮುಟ್ಟಿ ಮುಟ್ಟಿ ನೋಡಿಕೊಳ್ಳುವಂತೆ ಒಂದೊಂದು ಪೆಟ್ಟು ಕೊಟ್ಟು ಉರಳಿಸಬೇಕು. ಅಷ್ಟಾದರೆ ಸಾಕು, ಅದೇ ನನ್ನ ನಾರದಲೀಲೆ. ಸರಸ್ವತೀ ಪತಿಯಾದ ನಮ್ಮ ಜನಕನಿಗೆ ಪಂಚಮುಖಗಳಿವೆ. ಒಂದೊಂದು ಮುಖವಿದ್ದೇ ಅತಿಯಾಗಿ ದುರಹಂಕಾರಪಡುವವರು ಇರುವಾಗ ಐದು ಮುಖಗಳಿರುವ ನಮ್ಮ ಜನಕನಿಗೆ ಇನ್ನೆಷ್ಟು ದುರಹಂಕಾರವಿರಬೇಕು. ಏನಕೇನಾಪ್ಯುಪಾಯೇನ, ಆತನ ಒಂದು ತಲೆಯನ್ನು ತೆಗೆಸಬೇಕು ; ಇದು ನನ್ನ ಪ್ರಥಮ ಸಂಕಲ್ಪ.

ಆ ಈಶ್ವರನು ನೋಡುವುದಕ್ಕೆ ಯೋಗಿಯಂತೆ ವೇಷವನ್ನು ಧರಿಸಿದಾನೆ. ಮಾಡುತ್ತಿರುವ ಕಾರ್ಯವಾದರೋ ಕೈಲಾಸದಲ್ಲಿ ಗೌರಿಯೊಡನೆ ಲೀಲಾವಿಲಾಸ ; ಇದು ಯುಕ್ತವೆ ! ಯೋಗಿಯಾದಮೇಲೆ ಮನೆ ಮನೆಗೂ ಹೋಗಿ ಭಿಕ್ಷಾಟನೆ ಮಾಡುತ್ತಿರಬೇಡವೆ ? ಇರಲಿ. ಆ ಈಶ್ವರನ ಕೈಯಲ್ಲಿ

ಬ್ರಹ್ಮಕಪಾಲವನ್ನೇ ಕೊಡಿಸಿ ಮನೆ ಮನೆಯಲ್ಲಿಯೂ ತಿರಿಯುವಂತೆ ನಾನು ಮಾಡುವೆನು. ಇದು ನನ್ನ ದ್ವಿತೀಯ ಸಂಕಲ್ಪವು. ಆದರೆ ಆ ಮಾಯಾ ಪಿಯಾದ ವಿಷ್ಣುವಿಗೆ ಏನ-ಮಾಡುವುದು ? ಸರ್ವದಾ ಆ ಚಂಚಲೆಯಾದ ಲಕ್ಷ್ಮಿಯನ್ನು ಆಲಿಂಗಿಸಿಕೊಂಡೇ ಇರುವನು. ಇದು ಆಜನ್ಮಬ್ರಹ್ಮಚಾರಿ ಯಾದ ನನಗೆ ಸ್ವಲ್ಪವೂ ಸಮಾಧಾನವಿಲ್ಲ. ಆಗಲಿ, ಆ ವಿಷ್ಣುವು ತನ್ನ ಪತ್ನಿಯನ್ನಗಲಿ ತಪಸ್ಸುಮಾಡುತ್ತಾ ಕುಳಿತುಕೊಳ್ಳುವಂತೆ ಮಾಡಿಬಿಡುವೆನು. ಇದೇ ನನ್ನ ತೃತೀಯ ಸಂಕಲ್ಪವು. ಈ ಕಾರ್ಯಗಳನ್ನು ಸಾಧಿಸುವುದಕ್ಕಾಗಿ ಈಗ ನಾನು ಯಾರಬಳಿಗೆ ಹೋಗಲಿ ? (ನೋಡಿ) ಓಹೋ ಕೆಲವರು ದೇವತೆಗಳು ಈ ಮಾರ್ಗವಾಗಿಯೇ ಬರುತ್ತಿರುವರು. ಇರಲಿ, ನನ್ನ ಲೀಲೆ ಯನ್ನು ಇಲ್ಲಿಂದಲೇ ಆರಂಭಿಸುವೆನು. (ಪ್ರಕಾಶ) ಸ್ವರ್ಗಲೋಕವಾಸಿಗ ಳಾದ ತೇಜಸ್ವಿಗಳಿಗೆ ನಾರದನ ಪ್ರಣಾಮಗಳು.

(ನಾಲ್ವರು ಋಷಿಗಳು ಪ್ರವೇಶಿಸಿ) ಬ್ರಹ್ಮಮಾನಸ ಪುತ್ರರಾದ ನಾರದರಿಗೆ ವಂದನೆ ಗಳು.

ನಾರದ—ಇದೇನು, ತಪೋಧನರಾದ ತಮ್ಮ ಮುಖಮಂಡಲಗಳು ತೇಜೋಹೀನ ವಾಗಿ ಕಾಣಿಸುತ್ತಿರುವವಲ್ಲ, ಕಾರಣವೇನು ?

1ನೇ ಋಷಿ—ಏನು, ನಮ್ಮ ಮುಖದಲ್ಲಿ ತೇಜಸ್ಸಿಲ್ಲವೆ ?

ನಾರದ—ಇಲ್ಲ, ಬಹು ನಿಸ್ಸಾರವಾಗಿ ಕಾಣಿಸುತ್ತಿರುವುದಲ್ಲ !

2ನೆ ಋಷಿ—ನಾವು ಅನವರತವೂ ತಪೋನಿಷ್ಠೆಯಲ್ಲಿರುತ್ತಾ ನಮ್ಮ ಮುಖಗಳಲ್ಲಿ ಕಾಂತಿಯಿಲ್ಲವೆಂದರೆ ಹೇಗೆ ನಂಬುವದು ? ಚನ್ನಾಗಿ ನೋಡಿ ಹೇಳಿ, ನಾರ ದರೇ ?

ನಾರದ—ಅವರವರ ಮುಖವು ಅವರವರಿಗೆ ಹೇಗೆ ಕಾಣಿಸಬೇಕು ? (ಬಗ್ಗಿನೋಡಿ) ಇಲ್ಲ, ಇಲ್ಲ. ಸ್ವಲ್ಪವೂ ತೇಜಸ್ಸಿಲ್ಲ. ಕಾಂತಿವಿಹೀನವಾಗಿ ಕಾಣಿಸುವ ಈ ನಿಮ್ಮ ಮುಖಗಳನ್ನು ನೋಡುವದರಿಂದ ನನಗೆ ಬಹು ಸಂತಾಪವುಂ ಟಾಗುವುದು.

3ನೇ ಋಷಿ—ನಮ್ಮ ತೇಜಸ್ಸು ಹೀಗೆ ಕ್ಷೀಣವಾಗುವುದಕ್ಕೆ ಕಾರಣವೇನಿರಬಹುದು, ನಾರದರೆ ?

ನಾರದ—ಕಾರಣವಿಲ್ಲದೆಯೇ ಕಾರ್ಯವು ನಡೆಯುವದೆ ? ಆದರೆ ಆ ಕಾರಣವನ್ನು ನಾನು ತಿಳಿದಿದ್ದರೂ ಹೇಳುವಂತಿಲ್ಲ. ಪ್ರಮಾದವಿಚಾರ.

4ನೇ ಋಷಿ—ನಮ್ಮ ಮೇಲೆ ಕೃಪೆಯಿಟ್ಟು ತಾವು ಕಾರಣವನ್ನು ತಿಳಿಸಬೇಕು, ಮುನಿವರ್ಯ.

ನಾರದ—ತಿಳಿಸುವುದರಿಂದ ನಾನು ವೃಥಾ ನಿಷ್ಠೂರಕ್ಕೆ ಗುರಿಯಾಗುವೆನಲ್ಲದೆ ನಿಮಗೆ ಅದರಿಂದ ಫಲವೇನು ?

1ನೇ ಋಷಿ—ಕಾರಣವು ತಿಳಿದರೆ ನಮ್ಮ ತೇಜಸ್ಸು ಹೀನವಾಗದಿರುವಂತೆ ಎಚ್ಚರ ನಾಗಿರುವೆವು.

ನಾರದ—ನೀವು ಎಷ್ಟೇ ಎಚ್ಚರವಾಗಿದ್ದರೂ ಪ್ರಬಲರಾದವರು ನಿಮ್ಮ ತೇಜಸ್ಸನ್ನು ಆಕರ್ಷಿಸುತ್ತಿರುವುದರಿಂದ ನೀವು ಹೇಗೂ ತೇಜೋಹೀನರಾಗಲೇಬೇಕು.

2ನೇ ಋಷಿ—ಅದಾರು, ಅಂತಹ ಪ್ರಬಲರು ?

ನಾರದ—ನಮ್ಮವರನ್ನು ನಾವೇ ಬಹಿರಂಗಪಡಿಸುವುದೇ ? ಈ ವಿಚಾರವು ಬೇಡ ಕ್ಷಮಿಸಿ.

3ನೇ ಋಷಿ—ಆದಾರು ತಮ್ಮವರು ? ನಮ್ಮ ಮೇಲೆ ಅನುಗ್ರಹವಿಟ್ಟು ಹೇಳಬೇಕು.

ನಾರದ—ನಮ್ಮ ತೀರ್ಥರೂಪರವರು ಈ ನಿಮ್ಮ ತೇಜೋಹಾನಿಗೆ ಮೂಲಕಾರಣರು.

4ನೇ ಋಷಿ—ಏನು ನಿಶ್ಚಯವೆ ! ಬ್ರಹ್ಮದೇವನೇ ನಮ್ಮ ತೇಜಸ್ಸನ್ನು ಅಪಹರಿಸುತ್ತಿರುವನೇ !

ನಾರದ—ಅಹುದು. ಸರ್ವರೂ ತೇಜಸ್ವಿಗಳಾದರೆ ತನಗೆ ಗೌರವಕ್ಕೆ ಕುಂದಕವೆಂದು ಎಲ್ಲ ತೇಜಸ್ವಿಗಳ ತೇಜವನ್ನೂ ಆಕರ್ಷಿಸುತ್ತಿರುವನು.

1ನೇ ಋಷಿ—ಆದರೆ ನಮಗೆ ಮುಂದೆ ಗತಿಯೇನು, ನಾರದರೆ ?

ನಾರದ—ಸುಮ್ಮನಿದ್ದು ತೇಜಸ್ಸನ್ನು ಕಳೆದುಕೊಳ್ಳುತ್ತಿರುವುದೇ ಗತಿ.

3ನೇ ಋಷಿ—ಇದಕ್ಕೆ ಏನಾದರೊಂದು ಪರಿಹಾರವನ್ನು ತಾವೇ ತಿಳಿಸಬೇಕು, ನಾರದರೆ.

ನಾರದ—ನಾನು ಹೇಳುವಂತೆ ನೀವು ಕೇಳುವಿರೇನು ? ಬಿಡಿ-ಬಿಡಿ.

3ನೇ ಋಷಿ—ತಮ್ಮ ಆಜ್ಞೆಗೆ ಪ್ರತಿಯೂ ಉಂಟೆ, ಮಹಾತ್ಮ.

ನಾರದ—ಆದರೆ ನೀವೆಲ್ಲರೂ ಈಗ ನನ್ನೊಡನೆ ಕೈಲಾಸಕ್ಕೆ ಹೊರಡಿ, ಅಲ್ಲಿ ಈಶ್ವರನು ನಿಮ್ಮನ್ನು ಮಾತನಾಡಿಸಿದರೂ ಪ್ರತಿಯನ್ನೇ ಆಡದೆ ಮೌನನಾಗಿ ಶೋಕಿಸುತ್ತಾ ಕುಳಿತುಕೊಳ್ಳಿರಿ. ಉಳಿದ ಕಾರ್ಯವನ್ನು ನಾನು ಮಾಡುವೆನು.

ಎಲ್ಲರೂ—ಆಜ್ಞೆ, ಇಗೋ, ಸಿದ್ಧನಾಗಿರುವೆವು. ನಮ್ಮ ತೇಜಸ್ಸು ಹೀನವಾಗುತ್ತಿರುವಾಗ ನಾವು ಸುಮ್ಮನಿರುವದೆ ?

ನಾರದ—(ಸ್ವಗತ) ನನ್ನ ಲೀಲೆಗೆ ಪೀಠಿಕೆಯನ್ನು ಹಾಕಿರುವೆನು, ಇನ್ನು ಸರಾಗವಾಗಿ ನೆರವೇರುವುದು ನಾರದಲೀಲೆ. (ಪ್ರಕಾಶ) ಆದರೆ ಬನ್ನಿ, ಹೋಗುವ. (ಹೋಗುವರು)

## ಪ್ರವೇಶ 2

[ಕೈಲಾಸದಲ್ಲಿ ಸಭೆ]

[ಈಶ್ವರನು ಸಿಂಹಾಸನದಲ್ಲಿರುವನು. ಗಣಗಳು ಸ್ತುತಿಮಾಡುತ್ತಿರುವರು] (ಋಷಿಗಳೊಡನೆ ನಾರದನ ಪ್ರವೇಶ).

ಈಶ್ವರ—ನಾರದ, ಈ ತಪಸ್ವಿಗಳೊಡನೆ ಇಲ್ಲಿಗೆ ಬಂದಿರುವ ಕಾರಣವೇನು ?

ನಾರದ—ಹೇ, ಕೈಲಾಸನಾಥ. ನಾನು ಬಂದಿರುವದೇನೋ ತಮ್ಮ ಸಂದರ್ಶನಕ್ಕಾಗಿ. ಇವರು ಏತಕ್ಕಾಗಿ ಬಂದಿರುವರೆಂಬುದನ್ನು ನಾನು ಹೇಗೆ ಹೇಳಲಿ. ಅವರನ್ನೇ ಕೇಳಬಹುದಲ್ಲ ?

ಈಶ್ವರ—ಏನಿರೈ ತಪೋಧನರೇ, ನಿಮ್ಮ ಅಪೇಕ್ಷೆ ಏನು ? ಸಂದೇಹಪಡದೆ ವಿಜ್ಞಾಪಿಸಿ.

(ಋಷಿಗಳು ಮೌನ)

ಈಶ್ವರ—ಏತಕ್ಕೆ ನೀವು ಹೀಗೆ ಮೌನವನ್ನು ವಹಿಸಿರುವಿರಿ, ಕಾರಣವೇನು ?

(ಋಷಿಗಳು ಮೌನ)

ಈಶ್ವರ—ನಾರದ, ಮಾತನಾಡಿಸಿದರೂ ಇವರು ಪ್ರತಿಯನ್ನೇ ಆಡದೆ ನಿಂತಿರುವದೇತಕ್ಕೆ ?

ನಾರದ—ದೇವ, ಅವರ ಮುಖಗಳನ್ನು ಚನ್ನಾಗಿ ಕಟಾಕ್ಷಿಸಬೇಕು.

ಈಶ್ವರ—ಏನು, ಇವರ ಮುಖಗಳೇನಾಗಿರುವವು ? (ಬಂದುನೋಡಿ) ನನಗೆ ಏನೂ ಕಾಣಿಸುವುದಿಲ್ಲ ನಾರದ. ಇವರ ಮುಖಗಳು ಇರಬೇಕಾದ ರೀತಿಯಲ್ಲಿ ಇರುತ್ತಿರುವವು.

ನಾರದ—ಮುಖಗಳೇನೋ ಇರುವಂತೆಯೇ ಇದ್ದರೂ ತೇಜಸ್ಸಿನಿಂದ ರಹಿತನಾಗಿ ಕಾಣಿಸುತ್ತಿಲ್ಲವೆ ದೇವ. ಚನ್ನಾಗಿ ನೋಡಿ.

ಈಶ್ವರ—(ನೋಡಿ) ನಿಶ್ಚಯ, ಕಾಂತಿರಹಿತನಾಗಿರುವಂತೆ ಕಾಣುವುದು. ತಪಸ್ಸಿನ ವ ಹಿಮೆಯಿಂದ ವಿರಾಜಿಸುತ್ತಿರಬೇಕಾದ ಇವರ ಮುಖಮಂಡಲಗಳು ಹೀಗೆ ತೇಜೋ ಹೀನನಾಗಲು ಕಾರಣವೇನಿರಬಹುದು ?

ನಾರದ—ದೇವ, ಪ್ರಬಲಕಾರಣ—ಅದ್ಭುತವಾದ ಕಾರಣ—ನನಗೆ ತಿಳಿದಿದ್ದರೂ ನಾನು ಹೇಳುವಹಾಗಿಲ್ಲ.

ಈಶ್ವರ—ಎಂತಹ ಪ್ರಬಲಕಾರಣವಾದರೂ ನನ್ನೊಡನೆ ಹೇಳದಿರುವಂತಹ ವಿಚಾರವೂ ಉಂಟೆ ? ಹೇಳು, ನಾರದ—ಧೈರ್ಯವಾಗಿ ಹೇಳು.

ನಾರದ—ನನ್ನ ಗತಿಯೇನು ಶಂಕರ, ಕಾರಣವನ್ನು ಹೇಳಿದರೆ ನನ್ನನ್ನು ಸುಮ್ಮನೆ ಬಿಡುವರೆ !

ಈಶ್ವರ—ಯಾರ ಭಯಕ್ಕಾಗಿ ಹೀಗೆ ಸಂದೇಹಪಡುತ್ತಿರುವೆ ? ನಾನಿರುವಾಗ ಇತರರು ನಿನ್ನನ್ನು ಏನುತಾನೇ ಮಾಡಬಲ್ಲರು ?

ನಾರದ—ನಿನಗಿಂತಲೂ ಮೀರಿದವರೇ ಇವರ ತೇಜಸ್ಸನ್ನು ಅಪಹರಿಸಲು ಬದ್ಧ ಕಂಕಣರಾಗಿರುವಾಗ, ಅವರ ಗೋಪ್ಯವಿಚಾರವನ್ನು ನಾನು ಪ್ರಕಾಶಕ್ಕೆ

ತರುವದರಿಂದ ನಿನಗೂ ನನಗೂ ಇಬ್ಬರಿಗೂ ಅಪಾಯ ಸಂಭವಿಸಬಹುದು. ದೇವ, ಕ್ಷಮಿಸು.

ಈಶ್ವರ—ನನಗಿಂತಲೂ ಮಿಗಿಲಾದವರೇ ? ಎಂತಹ ಮಾತನಾಡುತ್ತಿರುವೆ ನಾರದ ? ಮತ್ತೊಂದು ಬಾರಿ ಹೀಗೆ ಹೇಳದಿರು. ನನಗಿಂತಲೂ ಅಧಿಕನು ಮತ್ತೊಬ್ಬನಿರುವನೋ ?

ನಾರದ—ಇದೇನು ಗೌರೀಕಾಂತ, ನಮ್ಮ ತೀರ್ಥರೂಪರವರು ನಿನಗಿಂತಲೂ ಮಿಗಿಲಾದ ಪ್ರತಾಪಶಾಲಿಗಳಲ್ಲವೆ ?

ಈಶ್ವರ—ಏನು, ನಿಮ್ಮ ಜನಕನಾದ ಬ್ರಹ್ಮನು ನನಗಿಂತಲೂ ಅಧಿಕನೇ ?

ನಾರದ—ಸಂದೇಹವೇನು, ಅಧಿಕನಾದುದರಿಂದಲೇ ನಿನ್ನನ್ನೂ ಲಕ್ಷ್ಯದಲ್ಲಿಡದೆ ಈ ದೇವತೆಗಳ ತೇಜಸ್ಸೆಲ್ಲವನ್ನೂ ಆಕರ್ಷಿಸಿ ಎಲ್ಲರನ್ನೂ ನಿರ್ವೀರ್ಯರನ್ನಾಗಿ ಮಾಡುತ್ತಿರುವನು.

ಈಶ್ವರ—ಇವರ ತೇಜೋಹಾನಿಗೆ ನಿಮ್ಮ ಜನಕನೇ ಕಾರಣನೆಂಬುದನ್ನು ನೀನು ಹೇಗೆ ಬಲ್ಲೆ ?

ನಾರದ—ಬ್ರಹ್ಮನು ಮಾಡುವ ಕಾರ್ಯದಿಂದ ಮಾತ್ರವೇ ಅವನ ರೀತಿಯನ್ನು ಇತರರು ತಿಳಿಯಬಲ್ಲರು. ನಾನಾದರೋ ಬ್ರಹ್ಮಮಾನಸಪುತ್ರನಾದುದರಿಂದ ಅವನು ತನ್ನ ಮನಸ್ಸಿನಲ್ಲಿ ಆಲೋಚಿಸುವದನ್ನು ಸಹ ನಾನು ತಿಳಿಯಬಲ್ಲೆನು.

ಈಶ್ವರ—ಆದರೆ ಈಗ ಏನುಮಾಡುವ, ನಾರದ ?

ನಾರದ—ಪ್ರಮಾದವಿಚಾರಿ, ನೀನಾದರೂ ಸರಿಯೆ, ನಾನಾದರೂ ಸರಿಯೆ, ಈ ಸಂದರ್ಭದಲ್ಲಿ ಪ್ರವೇಶಿಸುವದು ತರವಲ್ಲ. ಯಾರ ಅವಸ್ಥೆ ಏನಾದರೂ ಆಗಲಿ, ಅನ್ಯರ ಕ್ಷೇಮಚಿಂತನೆಗೆಂದು ಹೋಗಿ ನಾವೇತಕ್ಕೆ ಸಂಕಟಕ್ಕೆ ಸಿಲುಕಬೇಕು !

ಋಷಿಗಳು—ದೇವಾ, ನೀನು ಭಕ್ತಪರಾಧೀನನಲ್ಲವೆ, ಆಶ್ರಿತರಕ್ಷಕನಲ್ಲವೆ, ನೀನೂ ಉಪೇಕ್ಷಿಸುವದಾದರೆ ನಾವು ಅನಾಥರಾಗುವೆವು. ರಕ್ಷಿಸು, ರಕ್ಷಿಸು.

ಈಶ್ವರ—ತಾಪಸೋತ್ತಮರೇ, ಶಾಂತರಾಗಿ. ನಿಮ್ಮ ಕಷ್ಟವನ್ನು ನಾನು ಪರಿಹರಿಸುವೆನು.

ನಾರದ—ಅದು ಹೇಗೆ ಪರಿಹರಿಸುವೆ ಶಂಕರ ?

ಈಶ್ವರ—ನಾರದ, ಈಗ ನಾನು ಸತ್ಯಲೋಕಕ್ಕೆ ಹೋಗಿ ನಿಮ್ಮ ಜನಕನಿಗೆ ವಿವೇಕವನ್ನು ಹೇಳುವೆನು.

ನಾರದ—ಕೇಳದಿದ್ದರೆ ?

ಈಶ್ವರ—ದುರಹಂಕಾರಪಡುತ್ತಿರುವ ಅವನ ಶಿರಸ್ಸನ್ನು ಛೇದಿಸಿಬಿಡುವೆನು.

ನಾರದ—ಕೈಯ್ಯಲ್ಲಾಗದ ಮಾತು, ಶಂಕರ.

ಈಶ್ವರ—ಛೀ, ನಾರದ, ಬಾಯಿಮುಚ್ಚು.

ನಾರದ—ಅವನು ಸುಮ್ಮನಿರುವನೇ, ದೇವಾ ?

ಈಶ್ವರ—ಸುಮ್ಮನಿರದಿದ್ದರೆ ತಲೆಯನ್ನುಕಳೆದುಕೊಂಡು ರೋದಿಸಲಿ.

ನಾರದ—ಅವನು ಕಳೆದುಕೊಂಡ ತಲೆಯನ್ನು ನೀನು ಹಿಡಿದುಕೊಂಡು ರೋದಿಸುವ ಸ್ಥಿತಿಯು ಬಂದೀತೋ ಏನೋ ! ಈ ಕಾರ್ಯವು ತರವಲ್ಲ. ಶಂಕರ, ಇಲ್ಲದ ತಾಪತ್ರಯ.

ಈಶ್ವರ—ಅಷ್ಟು ಅಶಕ್ತನೆಂದರಿತೆಯೇನು, ನಾರದ, ನನ್ನನ್ನು ?

ನಾರದ—ಉಂಟೆ, ಉಂಟೆ, ಶಂಕರನೇ ಅಶಕ್ತನಾದರೆ ಇನ್ನು ಧೀರರನ್ನು ಎಲ್ಲಿಂದ ತರುವದು ? ಮತ್ತೇನೂ ಭಯವಿಲ್ಲ. ಆದರೆ ಹಿಂದೆ ಭಸ್ಮಾಸುರನು ಓಡಿಸಿ ಕೊಂಡು ಬಂದಾಗ ಆ ಪುಣ್ಯಾತ್ಮ ವಿಷ್ಣುನಾದರೂ ಇದ್ದನು, ನಿನ್ನ ಬೆಂಬ ಲಕ್ಕೆ ; ಹೇಗೋ ಸಂರಕ್ಷಿಸಿದನು. ಈಗ ಯಾರೂ ಅಂತಹ ಸಹಾಯಕರಿಲ್ಲ ವಲ್ಲ ಎಂದು ಅನುಮಾನಿಸುವೆನು. ಇರಲಿ ಚಿಂತೆಯಿಲ್ಲ. ಅಂತಹ ಪ್ರಮಾದ ಕಾಲವು ಬಂದರೆ ನಾನೇ ಇರುವೆನು. ನಡಿ, ನಿನ್ನನ್ನು ಸಂರಕ್ಷಿಸುವೆನು.

ಈಶ್ವರ—ಸಾಕು, ಸಾಕು, ನಿಲ್ಲಿಸು. ಅನ್ಯರ ಸಹಾಯದಿಂದಲೇ ಜೀವಿಸುವಂತಹ ಅಶಕ್ತನೇನು ನಾನು ? ನಡಿ ನಡಿ ; ನನ್ನ ಪ್ರತಾಪವನ್ನು ಪ್ರತ್ಯಕ್ಷದಲ್ಲಿ ನೋಡುವೆಯಷ್ಟೆ.

ನಾರದ—ಹಾಗೆ ಮಾಡಿದಮೇಲಾದರೂ ನಿನ್ನನ್ನು ಪುರುಷನೆಂದು ತಿಳಿದು ಆ ಗೌರಿ ಯು ಗೌರವಿಸಲಿ. ನಡಿ, ದೇವ.

ಈಶ್ವರ—ಆದರೆ ಈವರೆಗೂ ನನ್ನನ್ನು ನಪುಂಸಕನೆಂದು ಆ ಗೌರಿಯು ಭಾವಿಸಿರು ವಳೇನು ? ಛೀ, ಉನ್ಮತ್ತ, ಬಾ, ನನ್ನ ಹಿಂದೆ.

ನಾರದ—(ಸ್ವಗತ) ಇದೇ ನಾರದಲೀಲೆಗೆ ಗಣಪತಿ ಪೂಜೆ. (ಪ್ರಕಾಶ) ನಡಿ, ದೇವ, ಧೀರತ್ವವಿದ್ದರೆ ನೋಡಿಯೇ ಬಿಡುವ, ಈಗ.

## ಪ್ರವೇಶ 3

[ಸತ್ಯಲೋಕದಲ್ಲಿ]

ಬ್ರಹ್ಮ—ಸರ್ವರೂ ನನ್ನಂತೆಯೇ ತೇಜಸ್ವಿಗಳಾಗಿದ್ದರೆ ನನ್ನನ್ನು ಗೌರವಿಸುವವರಿನ್ನಾರು? ಅದಕ್ಕಾಗಿಯೇ ನಾನು ನನ್ನ ಪಂಚಮ ಮುಖದ ನೇತ್ರಗಳಿಂದ ನನ್ನ ಎದು ರಿಗೆ ಬಂದವರ ತೇಜಸ್ಸನ್ನೆಲ್ಲಾ ಆಕರ್ಷಿಸಿ ಅವರನ್ನು ದುರ್ಬಲರನ್ನಾಗಿ ಮಾಡುತ್ತಿರುವೆನು. ಇದರಿಂದ ಅವರಿಗೆಲ್ಲ ನನ್ನ ಮೇಲೆ ಅಸಮಾಧಾನವು ಅಂಕುರಿಸಬಹುದೋ ಏನೋ. ನಾನು ಆ ಹಂಗಿಗೂ ಅಂಜುವುದಿಲ್ಲ. ಆ ಅಲ್ಪ ಶಂಕರನನ್ನಂತೂ ಗಣನೆಗೇ ತರುವುದಿಲ್ಲ. ಅಂದಮೇಲೆ ನನಗೆ ಇನ್ನಾರ ಭಯವಿದೆ ? ಪ್ರಪಂಚ ಸೃಷ್ಟಿನಿಯಾಮಕನೇ ನಾನು.

ಈಶ್ವರ—ನಿಮ್ಮ ತಂದೆಯ ಪೌರುಷೋಕ್ತಿಯನ್ನು ಕೇಳಿದೆಯಾ, ನಾರದ, ಎಷ್ಟು ದುರಹಂಕಾರದಿಂದ ಮದಿಸಿರುವನು. ನಾನು ಅಲ್ಪ ಶಂಕರನಂತೆ ! ನನ್ನನ್ನು ಗಣನೆಗೇ ತರುವದಿಲ್ಲವಂತೆ !

ನಾರದ—ನಾನು ಆದಿಯಲ್ಲೆ ವಿಜ್ಞಾಪಿಸಲಿಲ್ಲವೆ ದೇವ ? ಅವನು ಮಹಾ ಸಾಹಸಿಯು, ಅದ್ಭುತ ಪರಾಕ್ರಮಿಯು, ಅವನ ಸಹವಾಸವೇ ತರವಲ್ಲ. ಬಾ, ಈಗಲೂ ಹಿಂದಿರುಗಿ ಹೊರಟುಹೋಗುವ.

ಈಶ್ವರ—ಆಗಲಿ, ಸಾಹಸಿಗಳಾರೆಂಬುದು ಈಗ ಕಾರ್ಯದಲ್ಲಿ ನಿನಗೆ ಗೊತ್ತಾಗುವದು. (ಬಂದು) ಬ್ರಹ್ಮ? ಬ್ರಹ್ಮ?

ಬ್ರಹ್ಮ—ಏನು, ಅದಾರವರು, ಹೀಗೆ ಕರೆಯುತ್ತಿರುವವರು ?

ಈಶ್ವರ—ನಾನು, ಕೈಲಾಸವಾಸಿಯಾದ ಶಂಕರನು.

ಬ್ರಹ್ಮ—ಏನು ? ಶಂಕರನಾದಮಾತ್ರಕ್ಕೆ ಮಾತಿನಲ್ಲಿ ಮರ್ಯಾದೆಯು ಕಿಂಚಿತ್ತಾದರೂ ಬೇಡವೇ ? ಬ್ರಹ್ಮನಂತೆ, ಬ್ರಹ್ಮ! ಹೀಗೆ ಕರೆಯುವಂತೆ ನಿನಗೆ ಹೇಳಿ ಕೊಟ್ಟವರಾರು ?

ಈಶ್ವರ—ಹಾಗೆ ಕರೆದುದರಿಂದ ನಿನಗೆ ಆದ ಅಗೌರವವಾದರೂ ಏನು ?

ಬ್ರಹ್ಮ—ಮಾತಿನಲ್ಲಿ ಕಾಣಬರುವ ಗೌರವಲಾಘವಗಳು ನಿನಗೆ ಹೇಗೆ ಗೊತ್ತಾಗ ಬೇಕು—ಪರ್ವತಪ್ರಾಂತ್ಯಗಳಲ್ಲೆ ವಾಸಿಸುವ ವನಚರನಿಗೆ, ಕಿರಾತನಿಗೆ, ಈ ಪಶುಪತಿಗೆ !

ಈಶ್ವರ—ಏನು ? ನಾನು ಕಿರಾತನೆ, ವನಚರನೇ, ಪಶುಪತಿಯೇ ! ನಿನಗೆ ತಲೆ ತಿರುಗುತ್ತಿರಬಹುದು !

ಬ್ರಹ್ಮ—ನಾನು ತಮ್ಮಂತೆ ತಲೆಯಮೇಲೆ ಸ್ತ್ರೀಯನ್ನು ಧರಿಸಿ ಚರಿಸುವುದಿಲ್ಲ. ನನಗೆ ತಲೆ ತಿರುಗಲು ಕಾರಣವಿಲ್ಲ.

ಈಶ್ವರ—ಛೀ, ಅನ್ಯರ ದೋಷವನ್ನೇ ಅನ್ವೇಷಿಸುತ್ತಿರುವ ಪಾಪಿ !

ಬ್ರಹ್ಮ—ದೋಷದ ಮೂರ್ತಿಯಾದ ನಿನ್ನಲ್ಲಿ ದೋಷವನ್ನು ಅನ್ವೇಷಿಸುವುದೇತಕ್ಕೆ ? ನೀನೇ ದೋಷಕ್ಕೆ ನಿಧಿ. ದೋಷಾಕರನಾದ ಆ ಕಳಂಕಿ ಚಂದ್ರನಂತೂ ನಿನ್ನ ತಲೆಯನ್ನು ಬಿಟ್ಟು ಕೆಳಗಿಳಿಯುವಂತೆಯೇ ಇಲ್ಲ.

ಈಶ್ವರ—ಛೀ, ಲಜ್ಜಾವಿಹೀನನಾಗಿ ಈ ಅವಲಕ್ಷಣ ಮುಖಗಳಿಂದ ಏನೆಂದು ಮಾತ ನಾಡುತ್ತಿರುವೆ, ವಿಕಾರರೂಪಿ !

ಬ್ರಹ್ಮ—ಲಕ್ಷಣವೂ ರೂಪವೂ ಸೌಂದರ್ಯವೂ ನಿನ್ನ ಹೆಸರಿಗೇ ಆಗಿಬಂದದ್ದು. ಪತ್ನಿಯನ್ನು ನೋಡಿದರೆ ಗಿರಿಯಲ್ಲಿ ಉದ್ಭವಿಸಿದವಳು, ಕಾಳಿ, ಕರಾಳಿ, ಚಂಡಿ, ಚಾಮುಂಡಿ, ದುರ್ಗಿ. ಒಬ್ಬ ಕುಮಾರನನ್ನು ನೋಡಿದರೆ ಆರುಮುಖದವನು, ಮತ್ತೊಬ್ಬನೋ ಆನೆಯ ಮುಖದವನು. ಎಲ್ಲರಿಗೂ ಲಕ್ಷಣವಾದ ನೇತ್ರ

ದ್ವಯವಿದ್ದರೆ ನೀನೋ ಅವಲಕ್ಷಣದ ಮುಕ್ಕಣ್ಣ. ನೀನು ಹತ್ತುವದು ವೃಷಭ, ಪತ್ನಿ ಹತ್ತುವದು ಸಿಂಹ. ಮಗನು ಹತ್ತುವದೊಂದು ಮೂಷಕ. ತಂದೆಯಾದರೆ ನಾಗಾಭರಣ, ಮಗನ ವಾಹನ ಮಯೂರ. ಒಂದಕ್ಕೊಂದಕ್ಕೆ ಸಂಬಂಧವಿಲ್ಲ, ಶುದ್ಧ ಅಸಂಬದ್ಧ, ಅವಲಕ್ಷಣ, ಅನ್ಯರನ್ನು ಮಾತ್ರ ಆಡಿಕೊಳ್ಳುವದಕ್ಕೇ ಆರಂಭಿಸುತ್ತಿರುವಿರಿ.

ನಾರದ—ದೇವ, ಏತಕ್ಕೆ ಈ ವ್ಯರ್ಥ ಕಲಹ, ಒಂದು ಹೇಳಿ ಹತ್ತು ಎನ್ನಿಸಿಕೊಳ್ಳುವದೇತಕ್ಕೆ ? ದಯಮಾಡು ನನ್ನೊಡೆಯ, ಹೊರಟುಹೋಗುವ. ಅವರೇ ದೊಡ್ಡವರಾಗಲಿ.

ಈಶ್ವರ—ಆ ಪುರುಷೋತ್ತಮನ ಗರ್ಭದಲ್ಲಿ ಈ ದುರಹಂಕಾರಿಯು ಜನಿಸಬಹುದೇ ? ಇವನಿಗೆ ತಕ್ಕ ಶಿಕ್ಷೆ ಮಾಡದೆ ಬಿಡುವುದು ಹೇಗೆ ?

ಬ್ರಹ್ಮ—ನನಗೆ ಶಿಕ್ಷೆ ಮಾಡುವಷ್ಟು ಸಮರ್ಥನೇನು ಈ ಅರ್ಧನಾರಿ ?

ಈಶ್ವರ—ಎಲ ಎಲಾ ಉನ್ಮತ್ತ !! (ನುಗ್ಗಿ ಐದನೆಯ ತಲೆಯನ್ನು ಛೇದಿಸುವನು), ಈಗ ನೋಡು, ನಾನು ಮಾಡಿದ ಶಿಕ್ಷೆಯನ್ನಾದರೂ (ತಲೆಯು ಕೈಗೆ ಅಂಟಿಕೊಳ್ಳುವದು).

ನಾರದ—ಶಂಕರ—ಎಂತಹ ಅನ್ಯಾಯವನ್ನು ಮಾಡಿದೆ ? ಅನ್ಯಾಯ, ಅನ್ಯಾಯ (ಸ್ವಗತ) ನನ್ನ ಪ್ರತಿಜ್ಞೆಯಲ್ಲಿ ಎರಡು ಕಾರ್ಯಗಳು ಒಟ್ಟಾಗಿಯೇ ನಡೆದವು.

ಈಶ್ವರ—ಇದೇನು ನಾರದ, ಈ ಶಿರಸ್ಸು ನನ್ನ ಕೈಗೇ ಅಂಟಿಕೊಂಡುಬಿಟ್ಟಿರುವದಲ್ಲ!

ನಾರದ—ಅಹುದು, ಅದು ಹಾಗೆಯೇ ಆಗಬೇಕಾದದ್ದು, ಶಂಕರ.

ಈಶ್ವರ—ಕಾರಣ ?

ನಾರದ—ಬ್ರಾಹ್ಮಣನನ್ನು ಕೊಲ್ಲುವದೇನು ಸಾಮಾನ್ಯ ಪಾತಕವೆ, ದೇವ ! ಬ್ರಹ್ಮಹತ್ಯಾದೋಷವು ನಿನ್ನನ್ನು ಆವರಿಸಿತು. ನಿನ್ನ ಅವಸಾನದವರೆಗೂ ಈ ಬ್ರಹ್ಮಕಪಾಲವು ನಿನ್ನ ಕೈಯನ್ನು ಬಿಡುವಹಾಗಿಲ್ಲ !

ಈಶ್ವರ—ಮುಂದೆ ಗತಿ ?

ನಾರದ—ಗತಿಯೇನು, ಈ ಬ್ರಹ್ಮಕಪಾಲವನ್ನು ಹಿಡಿದು ಮನೆ ಮನೆಗೂ ತಿರಿದು ತಿನ್ನುವದೇ ಗತಿ !

ಬ್ರಹ್ಮ—(ನೆಲವನ್ನೊದೆದು) ಸ್ವೇದಜಾ, ಬೇಗ ಬಾ.

ಸ್ವೇದಜ—(ಆವಿರ್ಭವಿಸಿ) ತಂದೆ, ಏನಾಜ್ಞೆ ?

ಬ್ರಹ್ಮ—ನನ್ನ ಸ್ವೇದದಿಂದ ಸೃಷ್ಟಿಸಲ್ಪಟ್ಟಿರುವ ನೀನು ಸ್ವೇದಜನೆಂದು ಕರೆಯಲ್ಪಡುವೆ. ನನ್ನ ಪೂರ್ಣವಾದ ಬಲವನ್ನೂ ನಿನಗೆ ನಾನು ಕೊಟ್ಟಿರುವೆನು. ಇಲ್ಲಿ ಬಾ (ಕಿವಿಯಲ್ಲಿ) ಇನ್ನು ಈ ನನ್ನ ವೈರಿಯನ್ನು ಚನ್ನಾಗಿ ವಿಚಾರಿಸಿಕೋ, ಬಿಡಬೇಡ. (ಅದೃಶ್ಯ)

ಈಶ್ವರ—ಇದೇನೋ ಮಹದ್ವಿಪತ್ತು ಬಂದಂತಿದೆ, ನಾರದ.

ನಾರದ—ಆಯಿತು, ನಿನ್ನ ಅವತಾರವೇ ಪೂರ್ತಿಯಾಯಿತು. ಆ ನಮ್ಮ ಗೌರಿಯು ಶಂಕರನೇನಾದನೆಂದು ಕೇಳಿದರೆ ಏನೆಂದು ಹೇಳಲಿ !

ಸ್ವೇದಜ—ನಿನ್ನನ್ನು ಇಲ್ಲೇ ಧ್ವಂಸಮಾಡಿಬಿಡುವೆನು ಬಾ, ಬ್ರಹ್ಮಘಾತಕೀ.

ಈಶ್ವರ—ನಾರದ, ರಕ್ಷಿಸು ರಕ್ಷಿಸು.

ನಾರದ—ಬೇಡ ಬೇಡವೆಂದು ಹೇಳುತಿದ್ದರೂ ಎಂತಹ ವಿಪತ್ತನ್ನು ತಂದುಕೊಂಡೆ, ದೇವ.

ಈಶ್ವರ—ಆದುದಾಯಿತು, ಈಗ ಪ್ರಾಣದಾನಮಾಡಿ ಕಾಪಾಡು.

ಸ್ವೇದಜ—ನಿನ್ನನ್ನು ಈಗಲೇ ತಿಂದುಬಿಡುವೆನು, ದ್ರೋಹಿ.

ಈಶ್ವರ—ನಾರದ, ಪ್ರಾಣವನ್ನುಳಿಸು.

ನಾರದ—ನೀನು ಅನ್ಯರ ಸಹಾಯವನ್ನು ಅಪೇಕ್ಷಿಸದಿರುವಂತಹ ಸ್ವಯಂ ಶೂರನಲ್ಲವೇ !

ಈಶ್ವರ—ಹಾಗೆಂದುದು ತಪ್ಪಾಯಿತು, ನಾರದ.

ನಾರದ—ನಾನು ಕಲಹಪ್ರಿಯನಲ್ಲವೆ, ಶಂಕರ !

ಈಶ್ವರ—ಕ್ಷಮಿಸು, ಮುಂದೆ ಹಾಗೆ ಕರೆಯುವದಿಲ್ಲ.

ನಾರದ—ಸ್ವೇದಜ, ನಮ್ಮ ಜನಕನಾದ ಬ್ರಹ್ಮನು ಶಂಕರನನ್ನು ಏನು ಮಾಡಬೇಕೆಂದು ನಿನಗೆ ಹೇಳಿರುವನು ?

ಸ್ವೇದಜ—ಸಂಹರಿಸಬೇಕೆಂದು.

ನಾರದ—ಇಲ್ಲ, ನೀನು ತಪ್ಪಾಗಿ ತಿಳಿದುಕೊಂಡಿರುವೆ ; ಆತನು ಹಾಗೆ ಹೇಳಿಲ್ಲ.

ಸ್ವೇದಜ—ಶಂಕರನನ್ನು ವಿಚಾರಿಸಿಕೋ ಬಿಡಬೇಡ, ಎಂದನಲ್ಲವೆ ನಮ್ಮ ಜನಕನು.

ನಾರದ—ಹಾಗೆಂದಮಾತ್ರಕ್ಕೆ ಸಂಹರಿಸಬೇಕೆಂದೋ ?

ಸ್ವೇದಜ—ಮತ್ತೇನು ?

ನಾರದ—ಛೀ, ಹಾಗಲ್ಲ ; ಹೋಗಿ ಆತನನ್ನೇ ಕೇಳಿ ತಿಳಿದು ಬಾ, ಹೋಗು.

ಸ್ವೇದಜ—ಎಂತಹ ಸಂದೇಹವನ್ನು ತಂದು ಹಾಕಿದನು ಈ ನಾರದನು, ಆಗಲಿ. ಈ ಪಾಪಿಯನ್ನು ನೋಡಿಕೊಳ್ಳುತ್ತಿರು. ಈಗಲೇ ಬರುವೆನು, (ಓಡುವನು).

ನಾರದ—ಶಂಕರ, ಇದೇ ತಕ್ಕ ಸಮಯ. ನೀನು ಎಲ್ಲೂ ನಿಲ್ಲದೆ ನಟ್ಟಗೆ ಓಡು, ಓಡು.

ಈಶ್ವರ—ಎಲ್ಲಿಗೆ ?

ನಾರದ—ವೈಕುಂಠಕ್ಕೆ, ನಮ್ಮ ತಾತನ ಬಳಿಗೆ.

ಈಶ್ವರ—ಅಲ್ಲಿಗೆ ಹೋಗುವದರಿಂದ ಆಗುವ ಫಲವೇನು ?

ನಾರದ—ಮಹಾವಿಷ್ಣುವಿನ ಸಂದರ್ಶನದಿಂದ ಈ ನಿನ್ನ ಬ್ರಹ್ಮಹತ್ಯಾಪಾತಕವು ಧ್ವಂಸವಾಗಿ ನೀನು ಪರಿಶುದ್ಧನಾಗುವದೇ ಫಲ. ಈ ಸ್ವೇದಜನ ಬಾಧೆ ತಪ್ಪಿ ನೀನು ಜೀವಿಸಿಕೊಳ್ಳುವದೇ ಫಲ. ಸಾವಕಾಶ ಮಾಡಲೇಬೇಡ. ಅಗೋ ಬಂದನು, ಬಂದನು, ನಿನ್ನ ವೈರಿ.

ಈಶ್ವರ—ಹೇಗಾದರೂ ಮಾಡಿ ನನ್ನನ್ನು ಸಂರಕ್ಷಿಸು, ನಾರದ, (ಓಡಿಹೋಗುವನು).

ನಾರದ—ಇವನು ಸ್ವಯಂಪ್ರತಾಪಶಾಲಿಯಂತೆ, ಏನು ಹೇಳುವದು ! ಆಗಲಿ, ಈಗ ನಾನು ಬ್ರಹ್ಮನ ಒಂದು ತಲೆ ತೆಗೆಸಿದ್ದಾಯಿತು. ಈ ಶಂಕರನ ಕೈಯಲ್ಲಿ ಬ್ರಹ್ಮಕಪಾಲವನ್ನು ಕೊಡಿಸಿ ಭಿಕ್ಷೆಗೆ ಬಿಟ್ಟದ್ದಾಯಿತು. ಇನ್ನು ಅವನೊಬ್ಬನಿರುವನು : ಆ ಕಪಟನಾಟಕಸೂತ್ರಧಾರಿ, ಇರಲಿ. ನಾರದನಿಗಿಂತಲೂ ಮೀರಿದವನೇನು !

ಸ್ವೇದಜ—ಎಲ್ಲೀ, ಆ ದ್ರೋಹಿ, ಶಂಕರ.

ನಾರದ—ಸ್ವೇದಜ, ಏನೆಂದು ಹೇಳಿದನು, ಬ್ರಹ್ಮನು ?

ಸ್ವೇದಜ—ಸಂಹರಿಸಲೇಬೇಕೆಂದನು. ತೋರಿಸು ಎಲ್ಲಿ ಆ ಬ್ರಹ್ಮಹತ್ಯಾದೋಷಿಯು.

ನಾರದ—ಎಲ್ಲಿರುವನೋ ನೀನೇ ಹುಡುಕಿನೋಡು.

ಸ್ವೇದಜ—ಅವನನ್ನು ಎಲ್ಲೂ ಬಿಡದಂತೆ ನೋಡಿಕೊಂಡಿರೆಂದು ನಿನಗೆ ನಾನು ಹೇಳಿಹೋಗಿರಲಿಲ್ಲವೆ ?

ನಾರದ—ನೀನು ಬೇಕಾದಂತೆ ಹೇಳುವೆ, ಆದರೆ ನಾನು ನಿನ್ನ ಕಿಂಕರನೇನು ?

ಸ್ವೇದಜ—ಛೀ, ಇವನು ವಂಚಕನು. ಇವನೊಡನೆ ವಾದಿಸುತ್ತಾ ನಿಂತರೆ ಫಲವಿಲ್ಲ. ಎಲ್ಲಿದ್ದರೂ ಹೇಡಿಯಾದ ಆ ಶಂಕರನನ್ನು ಹಿಡಿದು ಸಂಹರಿಸುವೆನು (ಹೋಗುವನು).

ನಾರದ—ಎಂತಹ ಪ್ರಬಲವಾದ ವರವನ್ನು ಈ ಸ್ವೇದಜನಿಗೆ ನಿಮ್ಮ ಜನಕನು ಕೊಟ್ಟಿರುವನು ಅಬ್ಬಬ್ಬ ! ಈ ಸ್ವೇದಜನು ಸಾಯುವಂತೆಯೇ ಇಲ್ಲ. ಶಂಕರನು ಬದುಕುವಂತೆಯೇ ಇಲ್ಲ. ಆಗಲಿ ನಾನೂ ವೈಕುಂಠಕ್ಕೆ ಹೋಗಿ ಮುಂದಿನ ತಂತ್ರವನ್ನು ನಡೆಸುವೆನು (ಹೋಗುವನು).

## ಪ್ರವೇಶ 4 [ವೈಕುಂಠದಲ್ಲಿ]

ಲಕ್ಷ್ಮಿ—ನಾಥನೇ, ನನ್ನ ವಾಮನೇತ್ರವು ಹಾರುತ್ತಿರುವದಕ್ಕೆ ಕಾರಣವೇನು !

ವಿಷ್ಣು—ದೇವಿ, ಸ್ತ್ರೀಯರಿಗೆ ಬಲಗಣ್ಣು ಹಾರುವದು ಅಶುಭಸೂಚನೆ.

ಲಕ್ಷ್ಮಿ—ಆದರೆ ನನಗೆ ಏನು ಅಶುಭವಾಗುವದು ?

ವಿಷ್ಣು—ನಿನ್ನ ಪ್ರೇಮಾಸ್ಪದವಾದ ಯಾವದೋ ಒಂದು ವಸ್ತುವನ್ನು ಕಳೆದುಕೊಳ್ಳುವೆ.

ಲಕ್ಷ್ಮೀ—ನನಗೆ ಪ್ರೇಮಾಸ್ಪದವೂ ಅಮೂಲ್ಯ ವಸ್ತುವೂ ತಾವೇ ಆಗಿರುವಿರಿ.

ವಿಷ್ಣು—ಆದರೆ ನನ್ನನ್ನೇ ಕಳೆದುಕೊಳ್ಳುವಿಯೋ ಏನೋ.

ಲಕ್ಷ್ಮೀ—ನನಗೂ ಹೀಗೆ ಅಮಂಗಳವೆ ನಾಥ ?

ವಿಷ್ಣು—ಯಾರಾದರೇನು, ಸರ್ವರೂ ಗ್ರಹಗಳ ಶಕ್ತಿಗೆ ಅಧೀನರೇ ತಾನೆ. ಗ್ರಹಚಾರವು ಕ್ರೂರವಾದರೆ ಬಂದದ್ದನ್ನು ಅನುಭವಿಸಿಯೇ ತೀರಬೇಕು.

ಲಕ್ಷ್ಮೀ—ತಮ್ಮನ್ನು ಕಳೆದುಕೊಂಡ ಮೇಲೆ ನನಗೆ ರಕ್ಷಕರಾರು ?

ವಿಷ್ಣು—ಮಹಾ ಚಂಚಲೆಯಾದ ನಿನಗೆ ರಕ್ಷಕರಿಗೆ ಕೊರತೆಯೇ ? ನೀನು ಅನುಗ್ರಹಿಸಿ ಬಂದರೆ ಸಾಕೆಂದು ನಿರೀಕ್ಷಿಸುತ್ತಿರುವ ಲಕ್ಷ್ಮೀಕಟಾಕ್ಷಾಕಾಂಕ್ಷಿಗಳು ಎಷ್ಟೋಮಂದಿ ಇರುವರು.

ಲಕ್ಷ್ಮೀ—ನಾನು ಅಂತಹ ದುರಾಚಾರಿಯೇ ಏನು ?

ವಿಷ್ಣು—ನಿನ್ನ ಅಲ್ಪವಾದ ಕಟಾಕ್ಷವು ಬಿದ್ದಮಾತ್ರಕ್ಕೇ ದುರಾಚಾರದ ವೃಷ್ಟಿಯೇ ವರ್ಷಿಸುವದು. ಇನ್ನು ಸ್ವಯಂ ನೀನೇ ನೆಲಸುವದಾದರೆ ಅಂತವರು ದುರಾಚಾರಕ್ಕೆ ನಿಧಿಗಳಾಗುವದರಲ್ಲಿ ಸಂದೇಹವೇನಿದೆ ?

ಲಕ್ಷ್ಮೀ—ಆದರೆ ನನಗೆ ಆವಾಸಭೂಮಿಯಾದ ತಾವೂ ದುರಾಚಾರಿಗಳೇ ?

ವಿಷ್ಣು—ನಾನೊಬ್ಬನೇ ಇರುವಾಗ ದುರಾಚಾರಿಯಾಗದಿದ್ದರೂ ನಿನ್ನೊಡನೆ ಸೇರಿದಾಗ ನಾನೂ ದುರಾಚಾರಿಯೆ. ನೀನು ಮಹಾ ಚಂಚಲಳು, ಉನ್ಮತ್ತಳು, ವಂಚಕಳು. ನಿನ್ನನ್ನು ಆಶ್ರಯಿಸುವವರಿಗೆ ದುರ್ಗತಿಯೇ ಗತಿ.

ಈಶ್ವರ—(ಬಂದು) ನಾರಾಯಣ, ನಾರಾಯಣ, ಏನು ಸಮಯ ?

ಲಕ್ಷ್ಮೀ—ನಿಮ್ಮ ಸಹೋದರಿಯ ಪತಿಗಳೇ ಬಂದಿರುವರು. ಈ ನಿಮ್ಮ ಮಾತುಗಳನ್ನು ಅವರಿಗೊಪ್ಪಿಸುವೆನು. ಶಂಕರದೇವ. ನಾನು ದುರಾಚಾರಿಯಂತೆ ಚಂಚಲೆಯಂತೆ, ಉನ್ಮತ್ತಳಂತೆ, ನನ್ನನ್ನು ನಂಬಿದವರಿಗೆ ದುರ್ಗತಿಯೇ ಗತಿಯಂತೆ, ಕೇಳಿದಿರಾ !

ಈಶ್ವರ—ನನ್ನ ಪ್ರಾಣಸಂಕಟವು ನನಗೆ, ಈ ವಿಚಾರವನ್ನು ಕಟ್ಟಿಕೊಂಡು ನಾನೇನುಮಾಡಲಿ ಲಕ್ಷ್ಮೀದೇವಿ. ಪತಿಪತ್ನಿಯರ ವಿವಾದದಲ್ಲಿ ಪ್ರವೇಶಿಸುವ ಅಧಿಕಾರವು ಇತರರಿಗಿಲ್ಲ. ಏನಿದ್ದರೂ ಇವನುಂಟು, ನೀನುಂಟು.

ವಿಷ್ಣು—ನನ್ನ ಸಹೋದರಿಯ ಪತಿಯಾದ ಶಂಕರನು ನನ್ನನ್ನು ಬಿಟ್ಟುಕೊಟ್ಟು ಮಾತನಾಡುವನೇನು, ಲಕ್ಷ್ಮೀ ?

ಲಕ್ಷ್ಮಿ—ಆಹಾಹಾ, ಏನು ಸಹೋದರಿಯ ಪತಿಯೊ ಈ ಪಶುಪತಿ ! ಈ ಭಿಕ್ಷುಕ ನನ್ನು ಆಶ್ರಯಿಸಿ ಏನು ಸುಖಪಡುವಳೋ ಆ ನಮ್ಮ ಮಂಗಳಗೌರಿ ! ಆ ಲಾವಣ್ಯನಿಧಿ ? ಇವನೆಲ್ಲಿ ಲಭಿಸಿದನೋ ಶೃಂಗಾರದ ಗಂಧವೇ ಇಲ್ಲದ ಬಡಜೋಗಿ.

ನಾರದ—ಬಂದು ಏನು, ಏನು, ನಾನು ಶೃಂಗಾರದ ಗಂಧವೇ ಇಲ್ಲದ ಬಡ ಜೋಗಿಯೋ ?

ಲಕ್ಷ್ಮಿ—ಓಹೋ ಸಕಾಲಕ್ಕೇ ಬಂದನು ನಮ್ಮ ನಾರದನು ; ಇವನೇ ಸರಿ, ಇಂತಹ ನ್ಯಾಯಗಳನ್ನು ನಿರ್ಣಯಿಸುವುದಕ್ಕೆ.

ವಿಷ್ಣು—ನಾರದನೇತಾನೇ, ಅವನ ಕೈಗೆ ಸಿಕ್ಕಿದಮೇಲೆ ನ್ಯಾಯವನ್ನು ನಿರ್ಣಯಿಸುವದರಲ್ಲಿ ಸಂದೇಹವೇನಿದೆ ? ಸರಿಯಾದ ತೀರ್ಮಾನವನ್ನೇ ಹೇಳಿ ಬಿಡುವನು !

ಲಕ್ಷ್ಮಿ—ನಾರದ, ಇವರ ದುರಹಂಕಾರದ ಮಾತುಗಳನ್ನು ಕೇಳಿದೆಯಾ ?

ನಾರದ—ಅದು ಜನ್ಮಾರಭ್ಯ ಬಂದದ್ದು ತಾಯಿ. ಕಪಟದಮೂರ್ತಿಯೇ ಅಲ್ಲವೆ, ಇವರು.

ವಿಷ್ಣು—ಆರಂಭವಾಯಿತಲ್ಲವೆ ನಾರದ, ನಿನ್ನ ಲೀಲೆಗೆ.

ಈಶ್ವರ—ಈ ಲಕ್ಷ್ಮಿಯ ಸಂಭ್ರಮದಲ್ಲಿ ನನ್ನನ್ನು ಯಾರೂ ಕೇಳುವವರೇ ಇಲ್ಲವಲ್ಲ. ಏನುಮಾಡಲೀ.

ಲಕ್ಷ್ಮಿ—ನಾನು ಚಂಚಲೆಯಂತೆ, ದುರಾಚಾರಿಯಂತೆ, ಉನ್ಮತ್ತಳಂತೆ, ನನ್ನನ್ನು ಆಶ್ರಯಿಸಿದವರಿಗೆ ದುರ್ಗತಿಯೇ ಗತಿಯಂತೆ !

ನಾರದ—ನಿನಗೆ ವಿವೇಕವು ಸಾಲದು, ಲಕ್ಷ್ಮೀದೇವಿ. ನೀನು ಬಿಗಿಯಾಗಿದ್ದರೆ ಇಂತಹ ಮಾತುಗಳೆಲ್ಲವೂ ಈಚೆಗೆ ಬರುತ್ತಿತ್ತೆ ? ನಾನೇ ಲಕ್ಷ್ಮಿಯಾಗಿರಬೇಕಾಗಿತ್ತು, ನನ್ನನ್ನು ಯಾರಾದರೂ ಹೀಗೆನ್ನಬೇಕಾಗಿತ್ತು. ಆಗ ಏನು ಮಾಡುತ್ತಿದ್ದನೋ ಹೇಳಿ ಫಲವೇನು, ನಾನು ಹೇಳುವಂತೆ ನೀನು ಕೇಳುವವಳೂ ಅಲ್ಲ. ನಿನಗೆ ಹೇಳಲೂ ಬಾರದು, ಬಿಡು.

ಲಕ್ಷ್ಮಿ—ಅದೇನು ಮಾಡಬೇಕೋ ಹೇಳು, ನಾರದ ; ಅದರಂತೆಯೇ ಮಾಡಿ ಬಿಡುವೆನು.

ನಾರದ—ನಿನ್ನನ್ನು ನಂಬಿದವರಿಗೆ ದುರ್ಗತಿ ಎಂದನಲ್ಲವೆ ಇವನು, ಈ ನಾರಾಯಣನು. ಇವನನ್ನು ನಂಬಲೇಬೇಡ, ಬಿಟ್ಟು ನಡಿ, ಮತ್ತೇನಿಲ್ಲಾದರೂ. ಪತ್ನಿಯನ್ನು ಅಗಲಿ, ಬಾಯಿಬಾಯಿ ಬಿಡಲಿ. ಆಗ ನಿನ್ನ ಬೆಲೆಯಾದರೂ ಗೊತ್ತಾಗಲಿ.

ವಿಷ್ಣು—ಸ್ವಾಮಿ, ನಾರದಮಹಾಮುನಿವರ್ಯರೇ, ಸಾಕು ಸಾಕು, ತಮ್ಮ ಉಪದೇಶ. ಮೊದಲೇ ಮಹಾಚಪಲೆ—ಇವಳು.

ಲಕ್ಷ್ಮಿ—ಉಪದೇಶವೇನು, ನಾರದನ ಮಾತು ಸತ್ಯವೇ. ಇಗೋ ನಾನಿದ್ದರೆ ದುರ್ಗತಿಯೋ, ಇಲ್ಲದಿದ್ದರೆ ದುರ್ಗತಿಯೋ ತಮಗೆ ಚೆನ್ನಾಗಿ ಗೊತ್ತಾಗಲಿ. ನಾನು ಹೊರಟೇ ಹೋಗುತ್ತೇನೆ.

ನಾರದ—ಮಾಡುವವರು ಕಾರ್ಯದಲ್ಲಿ ಮಾಡಿತೋರಿಸುವರಲ್ಲದೆ, ವೃಥಾ ಬಾಯಲ್ಲಿ ಆಡಿತೋರಿಸುವರೇನು, ಲಕ್ಷ್ಮೀದೇವಿ ?

ಲಕ್ಷ್ಮಿ—ಇಗೋ, ಹೊರಟೆನು ನಾರದ. ನಾನು ಚಂಚಲೆಯಂತೆ, ದುರಾಚಾರಿಯಂತೆ (ಹೋಗುವಳು).

ನಾರದ—ಇದಲ್ಲವೆ ನಿಜವಾದ ಪತಿವ್ರತೆಯರ ಲಕ್ಷಣ !

ವಿಷ್ಣು—ಎಂತಹ ಕಾರ್ಯವನ್ನು ಮಾಡಿದೆ, ನಾರದ ?

ಈಶ್ವರ—ನಾರಾಯಣ, ನಿನಗೆ ನನ್ನ ಜ್ಞಾಪಕವೇ ಬರಲಿಲ್ಲವೇ ?

ನಾರದ—ಓಹೋ ಶಂಕರದೇವ, ತಮ್ಮಾಗಮನವು ಯಾವಾಗ ?

ಶಂಕರ—ನಾನು ಆಗಲೇ ಬಂದೆನು. ಈ ಕಲಹ ಸಂಭ್ರಮದಲ್ಲಿ ನನ್ನನ್ನು ಯಾರು ತಾನೇ ಲಕ್ಷ್ಯಮಾಡುವವರು.

ವಿಷ್ಣು—ಆ ಲಕ್ಷ್ಮಿಯ ಸಂಭ್ರಮದಲ್ಲಿ ನಿನ್ನ ಸ್ಮರಣೆಯೇ ಲೋಪವಾಯಿತು, ಶಂಕರ.

ನಾರದ—ಅಹುದು, ನ್ಯಾಯವೇ, ಲಕ್ಷ್ಮೀಕಟಾಕ್ಷದಲ್ಲಿ ಮುಳುಗಿಹೋಗಿರುವಾಗ ಅಂತವರಿಗೆ ಈಶ್ವರನ ಜ್ಞಾಪಕವು ಬರುವುದಾದರೂ ಉಂಟೋ ! ಅಷ್ಟೇ ಅಲ್ಲದೆ ಬ್ರಹ್ಮಹತ್ಯಾದೋಷದಿಂದ ಅಪರಿಶುದ್ಧನಾದವನಮೇಲೆ ನಿನ್ನ ಅನುಗ್ರಹವು ಬರುವದೂ ಉಂಟೆ, ನಾರಾಯಣ.

ವಿಷ್ಣು—ಏನು, ಹಾಗಂದರೆ ; ಯಾರು-ಬ್ರಹ್ಮಹತ್ಯಾದೋಷಿಗಳು ?

ನಾರದ—ಇವರು, ಈ ಶಂಕರ ಮಹಾದೇವರು.

ಶಂಕರ—ಪ್ರಮಾದಕಾರ್ಯವಾಗಿ ಹೋಗಿದೆ, ನಾರಾಯಣ.

ಸ್ವೇದಜ—(ಹೊರಗೆನಿಂತು) ರಾಜ್ಯವೆಲ್ಲವನ್ನೂ ಸುತ್ತಿ ಇಲ್ಲಿಗೆ ಬಂದದ್ದಾಯಿತು. ಆಗಲಿ, ಯಾರಿರುವವರು ಒಳಗೆ ? ಆ ಭೀರುವಾದ ಶಂಕರನು ಬಂದಿರುವನೇನು ?

ನಾರದ—ಅಗೋ,ಅಗೋ, ಬಂದನು, ಇಲ್ಲಿಗೂ ಬಂದೇಬಿಟ್ಟನು; ಶಂಕರ-- ಆಯಿತು !

ಶಂಕರ—ಇವನು ನನ್ನನ್ನು ಸಂಹರಿಸುವದಕ್ಕೆ ಬಂದಿರುವನು. ನಾರಾಯಣ, ಸಂರಕ್ಷಿಸು.

ವಿಷ್ಣು—ನನ್ನ ಮರೆಬಿದ್ದವನನ್ನು ಸಂಹರಿಸುವ ಧೀರನೂ ಮತ್ತೊಬ್ಬನುಂಟೆ. ಧೈರ್ಯವನ್ನವಲಂಬಿಸು, ಶಂಕರ.

ಸ್ವೇದಜ—ಯಾರವರು, ಒಳಗೆ ? ನಾನು ಕೂಗಿದುದು ಕೇಳಿಸಲಿಲ್ಲವೋ ?

ವಿಷ್ಣು—ಯಾರವರು, ಹೀಗೆ ಬಾ.

ಶಂಕರ—ಮುಂದೇನುಗತಿ, ನಾರಾಯಣ !

ನಾರದ—ಪ್ರಮಾದ, ಪ್ರಮಾದ. ಪ್ರಪಂಚಕ್ಕೆ ಇನ್ನು ತ್ರಿಮೂರ್ತಿಗಳಿಲ್ಲ, ದ್ವಿಮೂರ್ತಿಗಳೇ ಆಗುವರು !

ಸ್ವೇದಜ—ಎಲ್ಲೀ, ಆ ಪಾಪಿ ಶಂಕರ, ಬ್ರಹ್ಮಹತ್ಯಾದೋಷಿ. ಅವನನ್ನು ಈಗಲೇ ಸಂಹರಿಸುವೆನು.

ವಿಷ್ಣು—(ಸ್ವಗತ) ಈತನಾವನೋ ಮಹಾರೌದ್ರವದನನಾಗಿ ಈ ಶಂಕರನನ್ನು ಸಂಹರಿಸುವದಕ್ಕೆ ಬಂದಿರುವನು. ಮೊದಲು ಇವನಿಗೆ ನನ್ನ ಯೋಗಮಾಯೆಯನ್ನು ಹರಡಿ ನಿದ್ರಿಸುವಂತೆ ಮಾಡುವೆನು. ಎಲೈ, ಇಲ್ಲಿನೋಡು ನಾನು ಯಾರು !

ಸ್ವೇದಜ—ನೀನೇ, ನಾನು ಕಾಣೆನೇ, ಶ್ರೀಮನ್ನಾರಾಯಣನಲ್ಲವೆ ! (ಹಾಗೆಯೇ ಮಲಗಿ ನಿದ್ರಿಸುವನು)

ನಾರದ—ಇವನನ್ನು ಹೀಗೆಯೇ ದೀರ್ಘನಿದ್ರೆಯಲ್ಲಿ ಮಲಗಿಸಿಬಿಡು, ನಾರಾಯಣ.

ವಿಷ್ಣು—ಶಂಕರ, ಹೀಗೆ ಬಾ, ವಿಚಾರವೇನು ?

ಶಂಕರ—ನಾನು ವಿಚಾರವನ್ನು ಅನಂತರ ತಿಳಿಸುವೆನು. ನೀನು ನಿನ್ನ ಬಲಭುಜವನ್ನು ತೋರಿಸು.

ನಾರದ—ಅಹುದು, ತೋರಿಸು, ತೋರಿಸು.

ವಿಷ್ಣು—ಏತಕ್ಕೆ, ನಾರದ ?

ನಾರದ—ಈ ತ್ರಿಶೂಲದಿಂದ ರಕ್ತಬರುವಂತೆ ಚುಚ್ಚಿಸಿಕೊಳ್ಳುವದಕ್ಕೆ.

ಶಂಕರ—ಸಂದೇಹಪಡದಿರು. ಬಾ, ನಾರಾಯಣ.

ವಿಷ್ಣು—ಏನಾದರೂ ಮಾಡು. (ಶಂಕರನು ತೋಳಿನಿಂದ ರಕ್ತವನ್ನು ತೆಗೆದು ಬ್ರಹ್ಮಕಪಾಲಕ್ಕೆ ತುಂಬುವನು).

ಶಂಕರ—(ದೃಷ್ಟಿಸಿನೋಡಿ) ರಕ್ತಜ, ಬೇಗ ಬಾ.

ರಕ್ತಜ—ಭೋ, ಭೋ, ಶಂಕರ, ಏನಾಜ್ಞೆ ?

ವಿಷ್ಣು—ಇದೇನು ಶಂಕರ, ನೀನು ಮಾಡುತ್ತಿರುವದು ?

ಶಂಕರ—ನಾರಾಯಣ, ಬ್ರಹ್ಮನ ದುರಹಂಕಾರದ ಐದನೆಯ ಮುಖವನ್ನು ನಾನು ಛೇದಿಸಿದೆನು. ನನ್ನನ್ನು ಸಂಹರಿಸುವದಕ್ಕಾಗಿ ಬ್ರಹ್ಮನು ಈ ಸ್ವೇದಜನನ್ನು ನಿರ್ಮಿಸಿದನು. ಈ ರಕ್ತಜನನ್ನು ನಿನ್ನ ಸಹಾಯಕ್ಕಾಗಿ ನಾನು ಸೃಷ್ಟಿಸಿರುವೆನು. ಇವನು ಬ್ರಹ್ಮಕಪಾಲದಿಂದಲೂ ನಿನ್ನ ರಕ್ತದಿಂದಲೂ ನನ್ನ ಫಾಲನೇತ್ರದ ತೇಜಸ್ಸಿನಿಂದಲೂ ಆವಿರ್ಭವಿಸಿದವನಾದುದರಿಂದ

ತ್ರಿಮೂರ್ತಿಗಳ ಪೂರ್ಣವಾದ ಶಕ್ತಿಯೂ ಇವನಿಗುಂಟು. ಇವನಿಗೆ ನರನೆಂದೂ ರಕ್ತಜನೆಂದೂ ನಾನು ನಾಮಧೇಯವನ್ನಿಟ್ಟಿರುವೆನು. ನೀವಿಬ್ಬರೂ ಮಿಳಿತರಾಗಿ ಈ ನನ್ನ ವೈರಿಯನ್ನು ಸಂಹರಿಸಿರಿ. ನನಗೆ ಬ್ರಹ್ಮಹತ್ಯಾ ದೋಷವು ಸಂಘಟಿಸಿತಾದ್ದರಿಂದ ಈ ಬ್ರಹ್ಮಕಪಾಲವನ್ನು ಧರಿಸಿ ಭಿಕ್ಷೆ ಬೇಡುತ್ತಾ ಸಂಚರಿಸುವೆನು. ನನಗೆ ಸಹಾಯಕನಾಗಿ ನಿಲ್ಲುವ ನಿನಗೆ ಮಂಗಳವಾಗಲಿ.

ವಿಷ್ಣು—ಶಂಕರ, ನೀನು ನಿರ್ಭಯನಾಗಿರು. ಇವನನ್ನು ನಿನ್ನ ಅಪೇಕ್ಷೆಯಂತೆಯೇ ಸಂಹರಿಸುವೆನು.

ನಾರದ—ಅನ್ಯರ ಸಹಾಯವನ್ನು ಅಪೇಕ್ಷಿಸುವಷ್ಟು ಅಶಕ್ತರೇನು, ಶಂಕರದೇವ ? ತಾವು ಸ್ವಯಂಪ್ರತಾಪಶಾಲಿಗಳಲ್ಲವೆ.

ಶಂಕರ—ಪುಣ್ಯಾತ್ಮ, ನಿನ್ನ ಧರ್ಮಕ್ಕೆ ನೀನು ಸುಮ್ಮನಿದ್ದರೆ ಸಾಕು, ಮಹರಾಯ.

ನಾರದ—ಈ ಮಹದುಪಕಾರವನ್ನು ಮಾಡಿ ನಿನಗೆ ಪ್ರಾಣದಾನಮಾಡುವ ಈ ನಾರಾಯಣನಿಗೆ ಏನು ನೀನು ಮಾಡುವ ಪ್ರತ್ಯುಪಕಾರ ?

ವಿಷ್ಣು—ನಾನು ಪ್ರತಿಫಲಾಪೇಕ್ಷೆಯಿಂದ ಈ ಶಂಕರನಿಗೆ ಉಪಕಾರಮಾಡುವದಿಲ್ಲ, ನಾರದ. ನಾವಿಬ್ಬರೂ ಏಕದೇಹ.

ನಾರದ—ನನಗೆ ಯಾರಾದರೂ ಹೀಗೆ ಸಹಾಯಮಾಡಿದ್ದರೆ ಅವರಿಗೆ ನನ್ನ ಕುಮಾರಿಯನ್ನೇ ಕೊಟ್ಟು ಲಗ್ನಮಾಡಿಬಿಡುತ್ತಿದ್ದೆನು.

ಶಂಕರ—ನನಗೆ ಕನ್ಯೆಯಿದ್ದರೆ ನಾನೂ ಈ ನಾರಾಯಣನಿಗೆ ಕೊಟ್ಟು ಈ ಉಪಕಾರಕ್ಕೆ ಪ್ರತಿಯನ್ನು ಮಾಡುತಿದ್ದೆನು. ನನಗೆ ಕನ್ಯೆಯೇ ಇಲ್ಲ.

ನಾರದ—ಮುಂದೆ ಆದರೆ ?

ಶಂಕರ—ಮುಂದೆ ಆಗುವದೆಂದು ಹೇಗೆ ಈಗಲೇ ನಿರ್ಧರಿಸುವದು ?

ನಾರದ—ಅಕಸ್ಮಾತ್ ಹಾಗೆ ಸಂಭವಿಸಿತು, ಆಗ ?

ಶಂಕರ—ನನಗೆ ಕನ್ಯೆಯು ಆಗುವುದೇ ಇಲ್ಲ.

ನಾರದ—ನಿನಗೆ ಮಕ್ಕಳಾಗುವದನ್ನೂ ಇಲ್ಲದ್ದನ್ನೂ ನೀನು ಕಂಡೇ ಇರುವೆಯೇನು ?

ಶಂಕರ—ನನಗೆ ಸಂತಾನವಾಗುವದನ್ನು ನಾನು ಕಾಣದೆ ಹೋಗುವೆನೇನು ? ಹೀಗೂ ಉಂಟೆ ನಾರದ ! ಪತಿಗೆ ಅಗೋಚರರಾಗಿ ಪತ್ನಿಯರು ಗರ್ಭವತಿಯರಾಗುವರೆ !

ನಾರದ—ಗಣಪತಿಯನ್ನು ಗೌರಿಯು ಪಡೆದಾಗ ಪತಿಗಳಾದ ತಾವು ಕಂಡೇ ಇದ್ದಿರಾ ? ಅಥವಾ ಕುಮಾರಸ್ವಾಮಿಯನ್ನು ತಾವು ಪಡೆದಾಗ ತಮ್ಮ ಪತ್ನಿಯು ಕಂಡೇ ಇದ್ದರೆ ? ನನ್ನನ್ನು ಕೆಣಕಬೇಡ, ದೇವ. ಕೇಳಿದಷ್ಟಕ್ಕೆ ಪ್ರತಿಯನ್ನು ಹೇಳು. ಅಕಸ್ಮಾತ್ ಕನ್ಯೆಯು ಆದರೆ ಈ ನಾರಾಯಣನಿಗೆ ಕೊಡುವೆಯಾ ?

ಶಂಕರ—ಕನ್ಯೆಯು ಆಗುವುದೇ ಇಲ್ಲ. ಆದರೆ ಈ ನಾರಾಯಣನಿಗೆ ಕೊಡದೆ ತಪ್ಪುವುದೇ ಇಲ್ಲ.

ನಾರದ—ಈ ಮಾತು ಜ್ಞಾಪಕದಲ್ಲಿರಲಿ. ತಾವು ಹೊರಡಿ.

ಶಂಕರ--ಇನ್ನೇನು ಸಂದರ್ಭವನ್ನು ಕಲ್ಪಿಸುವದಕ್ಕೆ ಈ ಪೀಠಿಕೆಯನ್ನು ಹಾಕುತ್ತಿರುವೆಯೋ ನಾರದ !

ನಾರದ—ಕಾರ್ಯದಲ್ಲಿ ತಾನೇ ತಿಳಿಯುವುದು. ತಾವು ಬಿಜಯಮಾಡಬಹುದು, ದೇವಾ.

ಶಂಕರ—ಈ ನಾರದನ ಸಹವಾಸವೇ ಬಹುಕಷ್ಟ (ಹೋಗುವನು).

ನಾರದ—ಪರಮಾತ್ಮ, ಇವನನ್ನು ಎಚ್ಚರಗೊಳಿಸುವದಿಲ್ಲವೆ ?

ವಿಷ್ಣು—ಆಗಲಿ (ವೈಸವರಲು ಸ್ವೇದಜನು ಏಳುವನು).

ಸ್ವೇದಜ—ಹಾ, ಎಲ್ಲಿ-ಎಲ್ಲೀ, ಆ ಪಾಪಿ ಶಂಕರ ?

ನಾರದ—ನನ್ನೊಡನೆ ಬಾ, ನಾನು ತೋರಿಸುವೆನು (ಹೋಗುವನು).

ವಿಷ್ಣು—ನೀನು ಶಂಕರನನ್ನು ಸಂಹರಿಸಲೇ ಬೇಕೆ ?

ಸ್ವೇದಜ—ಅಹುದು. ನಾನು ಹುಟ್ಟಿರುವುದೇ ಅವನ ಸಂಹಾರಕ್ಕೆ.

ವಿಷ್ಣು—ಆದರೆ ಮೊದಲು ನನ್ನನ್ನು ಜಯಿಸಬೇಕಷ್ಟೆ.

ಸ್ವೇದಜ—ಏತಕ್ಕೆ ?

ವಿಷ್ಣು—ಶಂಕರನು ನನ್ನ ಪರಮಗುರು. ನಾನು ಆತನ ಪ್ರಿಯ ಶಿಷ್ಯನು. ಗುರುವನ್ನು ಸಂಹರಿಸುವದಕ್ಕೆ ಮುಂಚೆ, ಈ ಶಿಷ್ಯನನ್ನು ಸೋಲಿಸಬೇಕಲ್ಲವೆ ?

ಸ್ವೇದಜ—ಆದರೆ ಬಾ, ಮೊದಲು ನಿನ್ನನ್ನೇ ಕೊಲ್ಲುವೆನು.

ರಕ್ತಜ—ಸ್ವಲ್ಪನಿಲ್ಲು, ಧೀರ. ನಾನೊಬ್ಬನಿರುವೆನು.

ಸ್ವೇದಜ—ನೀನ್ಯಾರು ಮಧ್ಯೆ ಬಂದವನು ?

ರಕ್ತಜ—ನಾನು ಈ ನಾರಾಯಣನ ಮುಖ್ಯ ಶಿಷ್ಯನು. ನನ್ನನ್ನು ಜಯಿಸಿದ ಮೇಲೆ ತಾನೆ ಈ ನಾರಾಯಣನನ್ನು ನೀನು ಜಯಿಸುವದು.

ಸ್ವೇದಜ—ಚನ್ನಾಗಿದೆ. ಶಂಕರನಿಗೆ ನಾರಾಯಣನು ಶಿಷ್ಯನು. ಈ ನಾರಾಯಣನಿಗೆ ನೀನು ಶಿಷ್ಯ. ಮೊದಲು ನಿನ್ನನ್ನು ಜಯಿಸಿ ಅನಂತರ ನಾರಾಯಣನನ್ನು ಗೆದ್ದು ಆಬಳಿಕ ಶಂಕರನನ್ನು ಕೊಲ್ಲಬೇಕೆಂದೋ ?

ವಿಷ್ಣು—ಅಹುದು, ಬಾ. ರಣಾಂಗಣಕ್ಕೆ ; ಯುದ್ಧಮಾಡಲು ಹೋಗುವ. ರಕ್ತಜ, ಬಾ ನನ್ನೊಡನೆ (ಹೋಗುವರು).

ಸ್ವೇದಜ—ಇವರು ಶುದ್ಧಮೂಢರು. ಅನ್ಯಾಯವಾಗಿ ಪ್ರಾಣಬಿಡುವರಲ್ಲ ! ಆಗಲಿ ನಾರಾಯಣನೂ ನನ್ನ ಕೈಯಿಂದ ಮೃತನಾಗಿ ಆ ಶಂಕರನೂ ಸಾಯುವು

ವಾದರೆ ನಮ್ಮ ತಂದೆಯಾದ ಬ್ರಹ್ಮನೇ ಬ್ರಹ್ಮಾಂಡಕ್ಕೆಲ್ಲಾ ಪ್ರಥಮ ಪೂಜ್ಯನಾಗುವನು (ಹೋಗುವನು).

**ಪ್ರವೇಶ 5** [ಬದರಿಕಾಶ್ರಮದಲ್ಲಿ]

[ನಾರಾಯಣನು ತಪಸ್ಸು ಮಾಡುತ್ತಿರುವನು. ರಂಭೆ, ಮೇನಕಿ, ತಿಲೋತ್ತಮೆ, ಸಖಿಯರು ಪ್ರವೇಶಿಸುವರು.]

ರಂಭೆ—ಸಖಿ, ಇದೇ ಆ ನಮ್ಮ ದೇವೇಂದ್ರನು ಸೂಚಿಸಿದ ಬದರಿಕಾಶ್ರಮಪ್ರದೇಶವು.

ಮೇನಕಿ—ಸಂದೇಹವೇನು ; ಇಗೋ-ಇಲ್ಲಿ ನೋಡು, ನಾರಾಯಣನು ಯೋಗಾರೂಢನಾಗಿ ಕುಳಿತಿರುವನಲ್ಲವೆ.—

ತಿಲೋ—ಲಕ್ಷ್ಮಿಯೊಡನೆ ಆನಂದದಿಂದ ವಿಲಾಸಗಳನ್ನು ಅನುಭವಿಸುತ್ತಾ ಸುಖದಲ್ಲಿದ್ದ ಈ ನಾರಾಯಣನಿಗೆ ಎಂತಹ ದುರ್ಗತಿಯು ಪ್ರಾಪ್ತನಾಯಿತು. ಪಾಪ ; ಮೂಗುಹಿಡಿದು ಕುಳಿತುಕೊಳ್ಳುವ ಈ ಅವಸ್ಥೆ.

1ನೇ ಸಖಿ—ಇನ್ನೊಬ್ಬನೆಲ್ಲಿ ? ಆ ನರನೋ—ರಕ್ತಜನೋ ?

2ನೇ ಸಖಿ—ಅಗೋ, ಅಲ್ಲಿನೋಡು ; ಆ ರಣಭೂಮಿಯಲ್ಲಿ ಈರ್ವರು ಘೋರ ಯುದ್ಧಮಾಡುತ್ತಿರುವರು.

ರಂಭೆ—ಅವರೀರ್ವರೂ ಸ್ವೇದಜ ರಕ್ತಜರಿರಬಹುದು.

1ನೇ ಸಖಿ—ಈಗ ನಾವು ಬಂದಿರುವ ಕಾರ್ಯವೇನು, ಅದನ್ನು ಯೋಚಿಸಿ.

2ನೇ ಸಖಿ—ರಂಭಾ, ಈ ನಾರಾಯಣನ ತಪೋವಿಘ್ನನಾಗುವಂತೆ ಒಂದು ಮನೋಹರವಾದ ಗಾನವನ್ನು ಆರಂಭಿಸು.

ರಂಭೆ—(ಹಾಡುವಳು).

ತಿಲೋ—ನಾನೂ ಒಂದು ಗಾನವನ್ನು ಹೇಳುವೆನು. (ಹೇಳುವಳು).

ಮೇನಕಿ—ಈ ನಾರಾಯಣನು ನಮ್ಮ ಗಾನಕ್ಕೆ ಮರುಳಾಗುವವನಲ್ಲ. ಬನ್ನಿ ; ನಾವೆಲ್ಲರೂ ಸೇರಿ ಇವನ ಮುಂದೆ ಮನೋಹರವಾಗ ನೃತ್ಯವನ್ನು ಮಾಡುವ (ನಾಟ್ಯನಾಡುವರು).

ನಾರಾಯಣ—ಛೇ, ಛೇ, ಈ ಅವಿವೇಕಿಗಳು ತಮಗೆ ಸಮಾನರಾದ ರೂಪವತಿಯು ಇಲ್ಲವೆಂದು ಅಹಂಕಾರದಿಂದ ನನ್ನ ತಪೋವಿಘ್ನಮಾಡಲು ಬಂದಿರುವರು. ಇದು ಇಂದ್ರನ ಪ್ರೇರಣೆಯಿರಬಹುದು. ಆಗಲಿ ; ಇವರ ಗರ್ವವಡಗುವಂತೆ ಓರ್ವ ಸುಂದರಿಯನ್ನು ನಿರ್ಮಿಸುವೆನು. (ತೊಡೆಯನ್ನು ತಟ್ಟಿ) ಊರ್ವಶೀ ,ಮಗಳೇ, ಬಾ-ನಿನ್ನ ಸಖೀಜನರೊಡನೆ ಪ್ರಕಟವಾಗು.

ಊರ್ವಶಿ—ಜಗನ್ಮೋಹಕ, ಶ್ರೀಮನ್ನಾರಾಯಣ, ಏನಾಜ್ಞೆ ?

ನಾರಾಯ—ಈ ದೇವಾಂಗನೆಯರು ನಾಚುವಂತೆ ನೃತ್ಯವನ್ನು ಮಾಡು. (ಊರ್ವ ಶಿ, ಸಖಿಯರು ಕುಣಿಯುವರು).

ನಾರಾಯ—ನೋಡಿ-ನೋಡಿ-ಮಂದಮತಿಗಳೇ ; ಇಂತಹ ಸೌಂದರ್ಯವತಿಯರು ನನ್ನ ರೋಮಕೂಪಗಳೊಳಗೆಲ್ಲಾ ತುಂಬಿರುವಾಗ, ಅಲ್ಪರಾದ ನೀವು ನನ್ನನ್ನು ಮೋಹಗೊಳಿಸಬಲ್ಲಿರಾ ?

ರಂಭೆ—ಮೇನಕಿ, ನೋಡಿದೆಯಾ, ನಮ್ಮ ಅಜ್ಞಾನವನ್ನು !

ಮೇನಕಿ—ನಾವು ಆ ನಾರದರ ದುರ್ಬೋಧೆಗಳನ್ನು ಕೇಳಿ ಬಂದುದೇ ಅನುಚಿತ.

ತಿಲೋತ್ತಮೆ—ಬನ್ನಿ ; ಈ ಸುಂದರಾಂಗಿಯ ಪಾದಸೇವೆ ಮಾಡುತ್ತಾ ಇಲ್ಲೆ ಇದ್ದುಬಿಡುವ ; ದೇವೇಂದ್ರನು ನಮ್ಮನ್ನು ಶಿಕ್ಷಿಸಿದರೂ ಸರಿಯೆ. (ಎಲ್ಲರೂ ಊರ್ವಶಿಯ ಹತ್ತಿರ ನಿಲ್ಲುವರು).

ಇಂದ್ರ—(ಬಂದು) ರಂಭೆ, ಮೇನಕಿ, ತಿಲೋತ್ತಮಾ, ಏನಿದು ? ನೀವು ಬಂದ ಕಾರ್ಯವೇನು ? ನೀವು ಮಾಡುತ್ತಿರುವದೇನು ?

ಮೇನಕಿ—ಜಗನ್ಮೋಹಕನಾದ ಈ ಸ್ವಾಮಿಯನ್ನು ಮರುಳು ಮಾಡಲು ನಾವು ಶಕ್ತರೆ ? ತನ್ನ ಊರುವಿನಿಂದ ಸೃಷ್ಟಿಸಿರುವನು, ಈಕೆಯನ್ನು !

ಇಂದ್ರ—ನಾನು ಆ ನಾರದರ ದುರ್ಬೋಧೆಯನ್ನು ಕೇಳಿ ಇವರನ್ನು ಕಳುಹಿಸಿದುದು ತಪ್ಪಾಯಿತು. ಇರಲಿ, ನಾರಾಯಣ, ನನ್ನ ಅಪರಾಧವನ್ನು ಮನ್ನಿಸಿ ಕಾಪಾಡು.

ಬ್ರಹ್ಮ—(ಬಂದು) ಶಂಕರನನ್ನು ಸ್ವೇದಜನು ಸಂಹರಿಸಿದನೋ ಇಲ್ಲವೋ ಕಾಣೆ ನಲ್ಲ.

ಸ್ವೇದಜ—(ಮರೆಯಲ್ಲಿ) ಹಾ-ತಂದೆ, ನಾನು ಕೆಟ್ಟೆನು ; ಈ ನರನಾರಾಯಣರು ನನ್ನ ಸಹಸ್ರ ವಜ್ರಕವಚವನ್ನೂ ಛೇದಿಸಿದರು. ಒಂದು ಕವಚವಾತ್ರವೇ ನಿಂತಿದೆ. ಇಗೋ, ನರನು ನನ್ನನ್ನು ಕೊಲ್ಲುವದಕ್ಕೆ ಬಂದಿರುವನು. ರಕ್ಷಿಸು ; ರಕ್ಷಿಸು.

ಬ್ರಹ್ಮ—ಈ ನಾರಾಯಣನು ಇರುವಾಗ ಶಂಕರನು ಸಾಯುವದೆಂದರೇನು ! ನಾನು ದುಡುಕಿದೆನು. ಇರಲಿ, ನಾರಾಯಣ, ನನ್ನ ಅಪರಾಧವನ್ನು ಮನ್ನಿಸು. ಈ ಸ್ವೇದಜನನ್ನು ಸಂರಕ್ಷಿಸು.

ನಾರದ—(ಬಂದು) ಏನು, ಪರಮಾತ್ಮ, ತಪಸ್ಸು ಸಾಂಗವಾಗಿ ನೆರವೇರುತ್ತಿರುವದೇ—

ವಿಷ್ಣು—ಲಕ್ಷ್ಮಿಯನ್ನು ರೇಗಿಸಿ ಓಡಿಹೋಗುವಂತೆ ಮಾಡಿ, ನನ್ನನ್ನು ತಪಸ್ಸಿನಲ್ಲಿ ಕುಳಿತುಕೊಳ್ಳುವಂತೆ ಮಾಡಿ, ಎಂತಹ ದುರ್ಗತಿಯನ್ನು ತಂದುಹಾಕಿದೆ ನಾರದ ?

ನಾರದ—ಶೃಂಗಾರದ ಗಂಧವೇ ಇಲ್ಲದ ಬಡಜೋಗಿಯಲ್ಲವೆ, ನಾನು ; ನನ್ನ ಮಾತನ್ನು ಕೇಳಿದಮೇಲೆ ನೀನೂ—

ವಿಷ್ಣು—ಇರಲಿ ; ಈ ಸ್ವೇದಜನನ್ನು ರಕ್ಷಿಸುವಂತೆ ಕೇಳುತ್ತಿರುವನಲ್ಲ-ನಿಮ್ಮ ಜನಕನು ; ಏನು ಮಾಡುವ ?

ನಾರದ—ಇವನನ್ನೇ ! ಈ ಶಂಕರದ್ವೇಷಿಯನ್ನೆ ! ನಮ್ಮ ತಂದೆಯ ಮಾತನ್ನು ಕೇಳಬೇಡ ನಾರಾಯಣ.

ಬ್ರಹ್ಮ—ನಾರದ, ಇಲ್ಲಿಗೂ ಬಂದೆಯಾ, ನಿನ್ನ ಸ್ವಭಾವವನ್ನು ತೋರಿಸುವದಕ್ಕೆ ?

ನಾರದ—(ನೋಡಿ) ಅಯ್ಯೋ, ನಮ್ಮ ತೀರ್ಥರೂಪರವರು ಇಲ್ಲೇ ಇರುವರಲ್ಲ ! ನಾರಾಯಣ, ಈ ಸ್ವೇದಜನನ್ನು ಸಧ್ಯಕ್ಕೆ ಕಾಪಾಡು.

ವಿಷ್ಣು—ಪ್ರಬಲಶತ್ರು, ಇವನು ; ಮುಂದೆ ಇವನು ಮೃತನಾಗುವ ಬಗೆ ಹೇಗೆ—?

ನಾರದ—ನಾನು ಹೇಳುವದನ್ನು ಕೇಳು :—ಸ್ವೇದಜನನ್ನು ಈ ಬ್ರಹ್ಮನ ವಶಕ್ಕೇ ಕೊಡು. ಬ್ರಹ್ಮನು ಇವನನ್ನು ಸೂರ್ಯನಿಗೆ ಕೊಡಲಿ. ಸೂರ್ಯನು ಸಾಕುತ್ತಿರಲಿ. ರಕ್ತಜನನ್ನು ಇಂದ್ರನಿಗೆ ಕೊಡು ; ಅವನು ಸಾಕಲಿ. ಮುಂದೆ ದ್ವಾಪರದಲ್ಲಿ ನೀನು ಕೃಷ್ಣಾವತಾರವನ್ನು ಮಾಡಬೇಕಷ್ಟೆ ; ಆಗ, ಕುಂತಿಯ ಪ್ರಾರ್ಥನೆಯಂತೆ, ಸೂರ್ಯನು ಸ್ವೇದಜನನ್ನು ಕುಂತಿಗೆ ಕೊಡಲಿ ; ಅವನೇ ಕರ್ಣನಾಗಿ ಹುಟ್ಟಲಿ. ಕುಂತಿಗೆ ಇಂದ್ರನು ರಕ್ತಜನನ್ನು ಕೊಡಲಿ ; ಅವನೇ ಅರ್ಜುನನಾಗುವನು. ಆಗ, ಕೃಷ್ಣನಾಗಿರುವ ನೀನು, ಅರ್ಜುನನಾಗಿರುವ ಈ ನರನಿಂದ, ಕರ್ಣನಾಗಿರುವ ಈ ಸ್ವೇದಜನನ್ನು, ಸಂಹಾರಮಾಡಿಸು.

ವಿಷ್ಣು—ಭಲ, ನಾರದ, ನಿನ್ನ ಯುಕ್ತಿಯು ಸ್ತುತ್ಯನಾದುದು. ಮುಂದಿನ ಲೀಲೆಗೆ ಇದು ಸಹಾಯನಾಗುವುದು.

ರಂಭೆ ಮುಂತಾದವರು—ದೇವಾ, ನಿನ್ನನ್ನು ಮೋಹಿಸಿಬಂದ ನಮ್ಮನ್ನು ಆಲಿಂಗಿಸಿ ಕಾಪಾಡು.

ವಿಷ್ಣು—ಇದಕ್ಕೇನು ಹೇಳುವೆ, ನಾರದ—?

ನಾರದ—ಏ-ನೀವೆಲ್ಲರೂ ಕೃಷ್ಣಾವತಾರಕಾಲದಲ್ಲಿ, ರಾಜಪುತ್ರಿಯರಾಗಿ ಜನಿಸಿ ; ಎಲ್ಲರೂ ನರಕಾಸುರನ ಹತ್ತಿರ ಬಂಧನದಲ್ಲಿ ಸಿಕ್ಕುವಿರಿ. ಆಗ, ಕೃಷ್ಣನಾಗುವ ಇವನು, ನಿಮ್ಮ ಬಂಧನವನ್ನು ಬಿಡಿಸಿ ಆಲಿಂಗನ ಸುಖವನ್ನು ಕೊಡುವನು.

ಊರ್ವಶಿ—ನಾನೆಲ್ಲಿರಬೇಕು, ದೇವಾ—?

ವಿಷ್ಣು—ಈ ನನ್ನ ಮಗಳಾದ ಊರ್ವಶಿಯನ್ನು ಇಂದ್ರನಬಳಿಗೆ ಕಳುಹಿಸೋಣವೇ, ನಾರದ ?

ನಾರದ—ಊಂ-ಹೂಂ-ಈ ನನ್ನ ಮಗಳಾದ-ಹೂಂ, ನಿನ್ನ ಮಗಳಾದ ಇವಳು ನಿನಗೆ ಅಜ್ಜಿಯೋ ಆಗುವ ಕಾಲವು ಬಂದರೋ— ?

ವಿಷ್ಣು—ಏನು ? ಊರ್ವಶಿಯು ನನಗೆ ಅಜ್ಜಿಯಾಗುವಳೇನು !

ನಾರದ—ಆದಾಗ, ತಾನೇ ತಿಳಿಯುವದು.

ವಿಷ್ಣು—ಇನ್ನೇಸೋ ತಂದೆಯಲ್ಲವೆ ನಾರದ,-ನಿನ್ನ ಲೀಲೆಗೆ ಪೀಠಿಕೆಯನ್ನು—

ನಾರದ—ದೇವಾ, ಇದು ನಾರದಲೀಲೆ ; ತ್ರಿಮೂರ್ತಿಗಳ ಆಟವೇನೂ ಸಾಗುವುದಿಲ್ಲ. ನನ್ನ ಆಟವೇ ಆಟ—

ಸರ್ವರೂ—ಏನು ವಿಚಿತ್ರಲೀಲೆಯೋ ಈ ನಾರದಲೀಲೆ ! !

---

## ದ್ವಿ ತೀ ಯಾ ಂ ಕ

**ಪ್ರವೇಶ 1** [ಉದ್ಯಾನದಲ್ಲಿ]

ನಾರದ—ನಾನೇನು ಸಾಮಾನ್ಯನೇ, ನಾರದ ; ನಾನೊಬ್ಬನು ನನ್ನ ನಾರದ ಲೀಲೆಯನ್ನು ಪ್ರಕಟಿಸುವುದಕ್ಕೆ ಹೊರಟರೆ, ನನ್ನ ಲೀಲೆಯ ಜತೆಗೆ ಎಷ್ಟು ಲೀಲೆಗಳು ಈಚೆಗೆ ತಮಗೆ ತಾವೇ ಪ್ರಕಾಶಕ್ಕೆ ಬರುತ್ತಿರುವವು ! ಆಗಲಿ, ಸಂತೋಷ ; ಇತಃಪರ ನಾರದಲೀಲೆಯನ್ನು ಯಾವರೀತಿ ಪ್ರಾರಂಭಿಸಬೇಕೋ ಸ್ಫುರಿಸದಂತಾಗಿದೆ ; ಏನುಮಾಡಲಿ.

ನಂದಿ—ನಮ್ಮ ಶಂಕರ ದೇವರೂ ಪಾರ್ವತೀ ಮಾತೆಯೂ ಕೈಲಾಸದಲ್ಲಿಲ್ಲ. ವಿಹಾರಾರ್ಥವಾಗಿ ಈ ಉದ್ಯಾನದ ಕಡೆಗೆ ಬಂದರೆಂದು ಭೃಂಗಿಯು ತಿಳಿಸಿದನು. ಎಲ್ಲಿನೋಡಿದರೂ ಕಾಣಲಿಲ್ಲ. ಇನ್ನೆಲ್ಲಿಂದು ಹುಡುಕಲಿ ? ಓಹೋ, ಇದೇನು ! ನಾರದರು ! ಮಹಾತ್ಮಾ, ನಮಸ್ಕರಿಸುವೆನು.

ನಾರದ—ನಂದೀಶ್ವರ ಸ್ವಾಮಿಗಳೇ, ಕುಶಲವೇತಾನೇ ?

ನಂದಿ—ಅನುಗ್ರಹ ಬಲದಿಂದ ಕುಶಲಿಯೋ ಸರಿ ; ನಮ್ಮ ಶಿವದೇವನನ್ನು ಕಂಡಿರೇನು ನಾರದರೇ— ?

ನಾರದ—ನಿಮ್ಮ ಶಿವನನ್ನು ನೀನೆ ಕಾಣದಮೇಲೆ, ನಾನು ಕಾಣುವದು ಹೇಗೆ ? ತ್ರಿಲೋಕಸಂಚಾರೀ.

ನಂದಿ—ಇಲ್ಲಿಗೆ ವಿಹಾರಾರ್ಥ ಬಂದರಂತೆ ; ನನಗೆ ಬೇರೆ ಸಿಕ್ಕಲಿಲ್ಲ.

ನಾರದ—ಎಲ್ಲೋ ದಂಪತಿಗಳು ವಿಹರಿಸುತ್ತಿರಬಹುದು. ಅದಿರಲಿ, ವಿಶೇಷವೇನಾದರೂ ಉಂಟೆ ನಂದಿ ?

ನಂದಿ—ಒಂದು ಅಂಶವನ್ನು ಕೇಳಬೇಕೆಂದು ಬಹುದಿನಗಳಿಂದಲೂ ನಿರೀಕ್ಷಿಸುತ್ತಿದ್ದೆನು. ಈಗ ಅದಕ್ಕೆ ಸಮಯಸಿಕ್ಕಿತು.

ನಾರದ—ಅದೇನು ಹೇಳು ?

ನಂದಿ—ಶಿವನಿಗೂ ವಿಷ್ಣುವಿಗೂ ಮೈತ್ರಿಯೋ, ಅಥವಾ ವೈರವೇ ಹೇಳಿ— ?

ನಾರದ—ಆ ಹರನಿಗೂ ಹರಿಗೂ ಒಂದೇ ಪ್ರಾಣ, ದೇಹವು ಮಾತ್ರ ಎರಡು.

ನಂದಿ—ಶಿವನೂ ವಿಷ್ಣುವೂ ಏಕ ದೇಹದಂತಿದ್ದಮೇಲೆ, ಶಿವಭಕ್ತರೂ ವಿಷ್ಣು ಭಕ್ತರೂ ತಾವು ತಾವು ಏತಕ್ಕೆ ಅನ್ಯೋನ್ಯದಿಂದಿರುತ್ತಾ ಇಲ್ಲದೆ, ಒಬ್ಬರನ್ನು ಕಂಡರೆ ಮತ್ತೊಬ್ಬರು ಉರಿದುರಿದು ಬೀಳುತ್ತಿರುವರು ?

ನಾರದ—ಅದಕ್ಕೆ ಅವರವರ ಅಜ್ಞಾನವೇ ಕಾರಣ. ವಿಷ್ಣುವಿನ ಸಹೋದರಿಯ ಪತಿಯೋ ಆ ಶಂಕರ ; ಭಾವ ಭಾವಮೈದಂದಿರು, ಇಬ್ಬರೂ.

ನಂದಿ—ಜನರ ಅಜ್ಞಾನದಿಂದ ಶಿವನಿಂದೆ ವಿಷ್ಣುಸ್ತೋತ್ರ, ವಿಷ್ಣುನಿಂದೆ ಶಿವಸ್ತೋತ್ರ ಗಳು, ಮಿತಿಯಿಲ್ಲದೆ ಹೆಚ್ಚಿವೆ ; ಇದಕ್ಕೆ ತಮ್ಮಂತಹ ಮಹಾತ್ಮರು ತಕ್ಕ ಚಿಕಿತ್ಸೆಯನ್ನು ಮಾಡದಿದ್ದರೆ ಲೋಕವು ಉದ್ಧಾರವಾಗುವದು ಹೇಗೆ ?

ನಾರದ—ಆಗಲಿ, ಈಗ ನೀನು ಎಲ್ಲಿಗೆ ಹೋಗಬೇಕು ನಂದಿ ?

ನಂದಿ—ಇನ್ನೇನು, ಕೈಲಾಸಕ್ಕೇ ಹಿಂದಿರುಗುವೆನು. ನಮಸ್ಕಾರ. (ಹೋಗುವನು)

ನಾರದ—ನಾರದಲೀಲೆಗೆ ಮುಂದಿನ ಮಾರ್ಗವನ್ನು ಈ ನಂದಿಯು ಎಚ್ಚರಿಸಿದನು. ಹರಿಹರರಿಗೆ ಭೇದವಿಲ್ಲವೆಂಬ ಜ್ಞಾನವನ್ನು ಜನರಿಗೆ ಉಂಟುಮಾಡು ವದೇ ನನ್ನ ಮುಂದಿನಲೀಲೆ, ಇರಲಿ ; ಶಂಕರನು ತನಗೆ ಕನ್ಯೆಯಾದರೆ ಹರಿಗೆ ಕೊಡುವೆನೆಂದು ಒಪ್ಪಿರುವನು ; ಅಲ್ಲದೆ ಊರ್ವಶಿಯು ನಿಮ್ಮ ಅಜ್ಜಿ ಯಾಗುವಳೆಂದು ನಾನು ವಿಷ್ಣುವಿಗೆ ಹೇಳಿರುವೆನು. ಈ ಮಾತುಗಳನ್ನು ನಾನು ಊರ್ಜಿತಪಡಿಸಬೇಕಾಗಿದೆ. ಆದರೆ ಈಶ್ವರನಿಗೆ ಕನ್ಯೆಯನ್ನು ನಾನು ಉಂಟುಮಾಡುವದು ಹೇಗೆ ? ನನಗಾಗಿ ಆ ಹರಿಯು ದಶಾವತಾರ ಗಳ ಜತೆಗೆ ಏಕಾದಶಾವತಾರವನ್ನು ವಹಿಸುವನೇ ? ಆಗಲಿ ; ಪ್ರಯತ್ನ ಕ್ಕಿಂತಲೂ ದೊಡ್ಡದಾವುದು. ಹೇಗೂ ಪಾರ್ವತೀಪರಮೇಶ್ವರರು ಈ ವನ ದಲ್ಲಿ ವಿಹರಿಸುತ್ತಿರುವರು. ಉಪಾಯದಿಂದ ಪಾರ್ವತಿಯನ್ನು ಕಂಡು, ಒಂದು ಸಂಧಾನವನ್ನು ಮಾಡುವೆನು. ಅಗೋ ! ಅವರೇ ಬರುತ್ತಿರು ವರು. (ಮರೆಯಾಗುವನು).

ಈಶ್ವರ—ಅಗೋ, ಅಲ್ಲಿನೋಡು ದೇವೀ, ಆ ಸರಸ್ಸಿನಲ್ಲಿ ಕಮಲಗಳು ಎಷ್ಟು ಮನೋಹರವಾಗಿ ಕಾಣಿಸುತ್ತಿರುವವು !

ನಾರದ—[ಚಪ್ಪಾಳೆ ತಟ್ಟುವನು. ಪಾರ್ವತಿ ಹಿಂದುಗಡೆ ತಿರುಗಿನೋಡುವಳು. ತಾನು ಬಂದಿರುವದನ್ನು ತಿಳಿಸಬೇಡವೆಂದು ಸನ್ನೆಮಾಡುವನು.]

ಈಶ್ವರ—ಏನುದೇವಿ, ನನ್ನಮಾತಿಗೆ ಪ್ರತಿಯೇ ಇಲ್ಲ ; ಮನಸ್ಸು ಅನ್ಯಾಕ್ರಾಂತ ವಾದಂತಿದೆ ?

ಪಾರ್ವತಿ—ಇಷ್ಟಾದರೂ ನಿಮಗೆ ನೀರಿನಲ್ಲಿರುವ ಕಮಲದಮೇಲೆ ಅಭಿಮಾನವು ತಪ್ಪುವಹಾಗಿಲ್ಲ. ಆ ಗುಡ್ಡದ ಮೇಲೆ ವಿರಾಜಿಸುತ್ತಿರುವ ಗಿರಿಕಮಲದ ಮೇಲೆ ನಿಮ್ಮ ಅಪೇಕ್ಷೆಯು ಅಂಕುರಿಸುವಂತೆಯೇ ಇಲ್ಲ.

ಈಶ್ವರ—ಎಲ್ಲಿ, ಗುಡ್ಡದಮೇಲಿನ ಗಿರಿಕಮಲ, ತೋರಿಸು ನೋಡುವ.

ಪಾರ್ವತಿ—ಜಲಕಮಲವೆಲ್ಲಿ, ನೀರಿನಲ್ಲಿ, ತಾವು ತೋರಿಸಿ ಮೊದಲು ;

ಈಶ್ವರ—ಜಲವೇ ಇಲ್ಲದಕಡೆ ಜಲಕಮಲವೆಲ್ಲಿಬಂದೀತು ? ದೇವೀ, ವಿನೋದಕ್ಕಾಗಿ ಹಾಗೆಂದೆನು.

ಪಾರ್ವತಿ—ನೀರಿನ ನಿಧಿಯೇ ಶಿರಸ್ಸಿನಮೇಲೆ ಕುಳಿತಿರುವಾಗ, ನೀರಿಲ್ಲವೆಂದರೆ ಯಾರು ಒಪ್ಪುವರು ; ಈ ಕಮಲವನ್ನೇ ಅಲ್ಲವೆ ತಾವು ಹೇಳಿದ್ದು—ಈ ಜಡ ಕಮಲ—

ಈಶ್ವರ—ಆದರೆ ನೀನು ಹೇಳುವ ಗಿರಿಕಮಲವು ಇದೇ ತಾನೇ, (ಅವಳನ್ನು ಮುತ್ತಿಡಲು ಹೋಗುವನು).

ಪಾರ್ವತಿ—ಎಲ್ಲೀ, ಆ ಗಿರಿಕಮಲವನ್ನು ತಂದುಕೊಡಿ ಮತ್ತೆ.

ಈಶ್ವರ—ನಾನು ಗುಡ್ಡವನ್ನು ಹತ್ತಲಾರೆನು ದೇವೀ.

ಪಾರ್ವತಿ—ಆದರೆ ಇಲ್ಲೇ ಇರಿ ; ನಾನೇ ಹೋಗಿ ತರುವೆನು.

ಈಶ್ವರ—ಬೇಡ, ಬಾ ; ನಾನೇ ತಂದುಕೊಡುವೆನು. ಪತಿಗಳಿರುವಾಗ ಪತ್ನಿಯರಿಗೆ ಪ್ರಯಾಸವೇತಕ್ಕೆ, (ಹೋಗುವನು).

ಪಾರ್ವತಿ—ಏನು ನಾರದರೇ, ಬನ್ನಿ, ಬನ್ನಿ.

ನಾರದ—ಶಂಕರನು ಹೊರಟುಹೋದನೆ, ನೋಡು.

ಪಾರ್ವತಿ—ಏನಾದರೂ ಚಮತ್ಕಾರವನ್ನು ಹೂಡುವದಕ್ಕೋ ?

ನಾರದ—ಅಂತಹುದೇನೂ ಇಲ್ಲ ಗೌರೀದೇವಿ ; ನಿನಗೆ ಮಕ್ಕಳೆಷ್ಟು ?

ಪಾರ್ವತಿ—ಇದೇನು ಹೀಗೆ ಕೇಳುವಿರಿ. ಇಬ್ಬರೇ ಅಲ್ಲವೆ, ನಮ್ಮ ಷಣ್ಮುಖಸ್ವಾಮಿ. ನಮ್ಮ ಗಣಪತಿಸ್ವಾಮಿ.

ನಾರದ—ಹೆತ್ತವರಿಗೆ ಹೆಗ್ಗಣ ಮುದ್ದೆಂಬ ನಾಣ್ಣುಡಿ ತಪ್ಪಲ್ಲ. ಅವರವರ ಮಕ್ಕಳನ್ನು ಅವರವರೇ ಪ್ರೀತಿಸದಿದ್ದರೆ ಮತ್ತಾರು ಗೌರವಿಸುವವರು.

ಪಾರ್ವತಿ—ಏನು ಹಾಗೆಂದರೆ, ನನ್ನ ಮಕ್ಕಳು ಲಕ್ಷಣವಾಗಿಲ್ಲವೆ ನಾರದರೆ ?

ನಾರದ—ಇಲ್ಲವೆ, ಮತ್ತೆ, ಒಬ್ಬ ಆರುಮುಖದವನು, ಮತ್ತೊಬ್ಬ ಆನೆಯ ಮುಖದವನು, ಆಹಾಹಾ, ಜನರು ಆಡಿಕೊಳ್ಳುವದಕ್ಕೆ ತಕ್ಕಂತೆಯೇ ಇದೆ.

ಪಾರ್ವತಿ—ಏನೆಂದು ಆಡುವರು, ಜನರು ?

ನಾರದ—"ಎಂತಹ ಮಂಗಳಗೌರಿ, ಪಾರ್ವತಿ, ಆಕೆಗೆ, ಅಂತಹ ಅವಲಕ್ಷಣದ ಮಕ್ಕಳು ಆಗಬಹುದೆ! ಆದರೂ ಎರಡೂ ಬಹಳಯು ಗಂಡೇ! ವಂಶವನ್ನು ಉದ್ಧಾರ ಮಾಡುವದಕ್ಕೆ ತಕ್ಕಹಾಗೆ ಒಂದು ಸ್ತ್ರೀ ಶಿಶುವಾದರೂ ಆಗಿದ್ದರೆ ಚನ್ನಾಗಿತ್ತು" ಎಂದು ಜನರು ಆಡುವರು.

ಪಾರ್ವತಿ—ನಮ್ಮ ಗಂಡುಮಕ್ಕಳ ಲಕ್ಷಣವು ದೇಹದ ಲಕ್ಷಣದಲ್ಲಿ ಅಲ್ಲ. ಅವರು ಪರಾಕ್ರಮಶಾಲಿಗಳಾಗಿ, ಕೀರ್ತಿವಂತರಾಗಿ, ವಿದ್ಯಾವಂತರಾಗಿ, ಮಾತಾ ಪಿತೃಗಳಿಗೂ ವಂಶಕ್ಕೂ ಕೀರ್ತಿಯನ್ನು ತಂದರೆ, ಅದೇ ಗಂಡುಮಕ್ಕಳ ಲಕ್ಷಣವೆನ್ನಿಸಿಕೊಳ್ಳುವದು. ನೋಡುವದಕ್ಕೆ ಸುಂದರರಾಗಿದ್ದು, ಶುದ್ಧ ಅವಿವೇಕಿಗಳೂ, ಭೀರುಗಳೂ, ದುರಾಚಾರಿಗಳೂ, ಆದರೆ ಅಂತಹ ಮಕ್ಕಳಿದ್ದರೇನು—ಬಿಟ್ಟರೇನು.

ನಾರದ—ಗಂಡುಮಕ್ಕಳ ರೀತಿಯೇನೋ ಹಾಗೆಯೇಸರಿ. ಹೆಣ್ಣುಮಕ್ಕಳ ವಿಚಾರವನ್ನು ಹೇಳು.

ಪಾರ್ವತಿ—ನಮಗೆ ಸ್ತ್ರೀಸಂತಾನವೇ ಇಲ್ಲವಲ್ಲ; ಆಮಾತು ನಮಗೇತಕ್ಕೆ?

ನಾರದ—ಏತಕ್ಕೆ ಇಲ್ಲ? ಸ್ತ್ರೀಸಂತಾನ.

ಪಾರ್ವತಿ—ಅದೃಷ್ಟವಿಲ್ಲ, ಇಲ್ಲ;

ನಾರದ—ಇದೇನು ಪಾರ್ವತೀ, ಸಂತಾನವು ಲಭಿಸುವದಕ್ಕೆ, ನಾಕಾದಷ್ಟು, ಪ್ರಯತ್ನವು ಬೇಕಲ್ಲದೆ, ಅದೃಷ್ಟವೇತಕ್ಕೆ?

ಪಾರ್ವತಿ—ಅದೃಷ್ಟವಿಲ್ಲದಿದ್ದರೆ ನಮ್ಮ ಪ್ರಯತ್ನವು ಸಾರ್ಥಕವಾಗುವದೇ ಇಲ್ಲ.

ನಾರದ—ಹಾಗೆನ್ನಬೇಡ. ಕ್ರಮವಾದ ರೀತಿಯಲ್ಲಿ ಪ್ರಯತ್ನ ಮಾಡಿದರೆ ಅದಕ್ಕೆ ಅದೃಷ್ಟವೂ ಸಹಾಯವಾಗುವದು.

ಪಾರ್ವತಿ—ಆದರೆ ನಾನು ಪ್ರಯತ್ನಿಸಲೇ, ನನಗೆ ಸ್ತ್ರೀಶಿಶುವಾಗುವದೇ?

ನಾರದ—ಈಶ್ವರನ ಕೃಪೆಯಿಂದ ಆದರೂ ಆಗಬಹುದು.

ಪಾರ್ವತಿ—ಆದರೂ ಸ್ತ್ರೀಸಂತಾನವನ್ನು ಆಶಿಸಬಾರದು. ಕನ್ಯೆಯು ಜನಿಸಿದರೆ ವ್ಯಥೆಗೆ ಕಾರಣ. ಆ ಶಿಶು ಪ್ರವರ್ಧಮಾನಳಾಗಿ, ತಕ್ಕ ವರನು ಲಭಿಸಿ, ಜಾಮಾತನೂ ಯೋಗ್ಯನಾಗಿ, ಪುತ್ರಿಯನ್ನು ಚೆನ್ನಾಗಿ ಸಂರಕ್ಷಿಸಿಕೊಂಡರೆ, ನಮಗೆ ಸಂತೋಷ, ಇಲ್ಲದೆ ಲಕ್ಷಣವಾಗಿ ಕನ್ಯೆಯನ್ನು ಪಡೆದು, ಪ್ರೇಮದಿಂದ ಸಂರಕ್ಷಿಸಿ, ಅಂತ್ಯದಲ್ಲಿ ಯಾವುದೋ ಒಂದು ಪ್ರಾರಬ್ಧಕ್ಕೆ ಗಂಟು ಹಾಕಿ, ಆ ಪುತ್ರಿಯು ಕಣ್ಣಿನಲ್ಲಿ ನೀರುಹಾಕುತ್ತಾ ಬಂದರೆ, ಕನ್ಯೆಯನ್ನು ಪಡೆದವರಿಗೆ ಸುಖವೇನಿರುತ್ತದೆ ಹೇಳಿ.

ನಾರದ—ಜಾಮಾತನ ಚಿಂತೆ ನಿಮಗೇತಕ್ಕೆ; ನಿಮಗೆ ತಕ್ಕ ಜಾಮಾತನನ್ನು ನಾನು ಕೊಡುವೆನು.

ಪಾರ್ವತಿ—ನನ್ನ ಪುತ್ರಿಗೆ ಜಾಮಾತನನ್ನೇ ನಿಶ್ಚಯಿಸಿಕೊಂಡು ಬಂದಿರುವ ನೀವು, ಇನ್ನು ನನಗೆ ಕನ್ಯೆಯಾಗುವದನ್ನೂ ನಿರ್ಧರಿಸಿಕೊಂಡೇ ಬಂದಿರುವಿರಲ್ಲವೆ ನಾರದರೇ ?

ನಾರದ—ದೇವೀ, ಇಲ್ಲಿಬಾ, (ಕಿವಿಯಲ್ಲಿ) ಮಾನ ಸಂರಕ್ಷಣೆಮಾಡು. ನಡೆಯಲಿ, ನಾರದಲೀಲೆ.

ಪಾರ್ವತಿ—ಆಗಲಿ ; ನಿನ್ನ ನಾರದಲೀಲೆ ನಡೆಯುವದರಲ್ಲಿ, ಸಧ್ಯಕ್ಕೆ ನಾನೊಂದು ಕನ್ಯಾರತ್ನವನ್ನಾದರೂ ಕಂಡು ಆನಂದಿಸುವೆನಲ್ಲ !

ನಾರದ—ಬಹುಗೋಪ್ಯ, ಬಹುಗೋಪ್ಯ, ತಾಯೀ, ಸ್ವಲ್ಪವೂ ಪ್ರಕಟವಾಗದಿರಲಿ, ವಿಚಾರ. (ಹೋಗುವನು)

ಪಾರ್ವತಿ—ಎಂತಹ ಸಾಹಸಿ, ಈ ನಾರದನು. ನೋಡುವದಕ್ಕೆ ಸಾಮಾನ್ಯ ಬ್ರಾಹ್ಮಣನು. ಮಾಡುವ ಕಾರ್ಯವೋ ಪ್ರಪಂಚವೇ ಕಲ್ಲೋಲಕಲ್ಲೋಲವಾಗುವಂತಹುದು !

ಈಶ್ವರ—(ಬಂದು) ದೇವೀ, ಈ ಗಿರಿಕಮಲವನ್ನು ಸಂಪಾದಿಸುವದಕ್ಕೆ ಬಹು ಪ್ರಯಾಸಪಟ್ಟೆನು.

ಪಾರ್ವತಿ—ಪತ್ನಿಯರ ವಾಕ್ಯವನ್ನು ಕೇಳುವದಕ್ಕೆ ಹೊರಟು, ಅವರಿಷ್ಟದಂತೆ ಆಚರಿಸುವದಕ್ಕೆ ನಿಂತರೆ, ಅಂತಹ ಪತಿಗಳಿಗೆ ಪ್ರಯಾಸಕ್ಕೇನುಕೊರತೆ, ಆಹಾ ! ಎಷ್ಟು ಮನೋಹರವಾಗಿರುವದು, ಈ ಗಿರಿಕಮಲ ! ಇದನ್ನು ನೋಡಿದ ಕೂಡಲೆ ಏನೋ ಒಂದು ವಿಧವಾದ ಆಶೆಯು ಅಂಕುರಿಸುತ್ತಿರುವದು.

ಈಶ್ವರ—ಅದೇನು ಆಶೆ ಹೇಳು ? ನಿನ್ನ ಆಶಾಪೂರ್ತಿಯನ್ನು ನಾನು ಮಾಡುವೆನು.

ಪಾರ್ವತಿ—ಈ ಕಮಲದಂತೆ ಮನೋಹರವಾದ ಮುಖಮಂಡಲವೂ, ಈ ಕಮಲದಂತೆ ಮೃದುವಾದ ಹಸ್ತಗಳೂ, ಈ ಕಮಲದಂತೆ ಸುಂದರವಾದ ಪಾದಗಳೂ, ಈ ಕಮಲದಂತೆ ವಿಶಾಲವಾದ ನೇತ್ರಗಳೂ, ಈ ಕಮಲದಂತೆ ಸುಗಂಧ ಪಿಸ್ರುಸುವುಳ್ಳ ದೇಹಕಾಂತಿಯೂ, ಕೂಡಿರುವ—

ಈಶ್ವರ—ಏನು ? ಕೂಡಿರುವ—ಮುಂದೆ ಹೇಳು, ಸಂದೇಹವೇತಕ್ಕೆ ?

ಪಾರ್ವತಿ—ಒಂದು ಸ್ತ್ರೀಶಿಶುವಾಗಬೇಕೆಂದು ನನಗೆ ತುಂಬಾ ಆಶೆ.

ಈಶ್ವರ—ನಾವು ಯಾರಿಗೆ ಕಷ್ಟವನ್ನುಂಟುಮಾಡಬೇಕೆಂದಿರುವೆವೋ ಅಂತವರಿಗೆ ಸ್ತ್ರೀಶಿಶುವಾಗಲೆಂದು ಅನುಗ್ರಹಿಸುವೆವು. ಹೀಗಿರುವಾಗ ನೀನೇತಕ್ಕೆ ಆ ಕಷ್ಟಕ್ಕೆ ಸಿಕ್ಕಿಕೊಳ್ಳಲಾಶಿಸುವೆ ದೇವೀ ?

ಪಾರ್ವತಿ—ಸ್ತ್ರೀಶಿಶುವಾದರೆ ಕಷ್ಟವೇನಿದೆ ?

ಈಶ್ವರ—ಆ ಕನ್ಯೆಯು ಪತಿವ್ರತೆಯಾದರೆ ಕುಲವನ್ನು ಉದ್ಧರಿಸುವಳು ; ದುರಾಚಾರಿಣಿಯಾದರೆ ವಂಶವನ್ನು ರೌರವಾದಿ ನರಕಗಳಿಗೆ ತಳ್ಳುವಳು ; ಅಲ್ಲದೆ

ಯೋಗ್ಯವರನು ಲಭಿಸಿದರೆ ಮಾನವುಳಿಯುವದು; ಇಲ್ಲವೇ ಅಯೋಗ್ಯ ವರನು ಸಿಕ್ಕಿದರೆ ಕನ್ಯಾಜನಕತ್ವವು ಶ್ವಾನನ ಬಾಳಿಕೆಗಿಂತಲೂ ಹೀನವಾಗುವದು.

ಪಾರ್ವತಿ—ಅಳಿಯನ ಚಿಂತೆ ತಮಗೆ ಬೇಡ; ಸರಿಯಾದ ಜಾಮಾತನನ್ನು ನಾನು ನಿಶ್ಚಯಿಸಿರುವೆನು.

ಈಶ್ವರ—ಆದರೆ ಕನ್ಯೆಯು ಲಭಿಸುವದೆಷ್ಟರಲ್ಲಿದೆ. ಇಗೋ ಈ ಕಲ್ಪವೃಕ್ಷವನ್ನು ಭಕ್ತಿಯಿಂದ ಪ್ರಾರ್ಥಿಸು. ನಿನಗೆ ಕನ್ಯೆಯು ಆಗುವದು.

ಪಾರ್ವತಿ—ನೀವೇ ಈ ಕಲ್ಪವೃಕ್ಷವೆಂದು ತಿಳಿದು ಇದನ್ನು ಬೇಡುವೆನು. (ಪ್ರದಕ್ಷಿಣೆ ನಮಸ್ಕಾರಮಾಡಿ) ಹೇ ಕಲ್ಪವೃಕ್ಷದ ಅಂತರ್ಯಾಮಿಯಾದ ಶಂಕರ ದೇವ, ನನಗೆ ಪತಿವ್ರತೆಯೂ ಸುಂದರಿಯೂ ಆದ ಒಬ್ಬಳು ಕನ್ಯೆಯನ್ನು ಅನುಗ್ರಹಿಸು.

ಈಶ್ವರ—ತಥಾಸ್ತು ದೇವೀ.

(ಕಲ್ಪವೃಕ್ಷದಿಂದ ಈಚೆಗೆ ಸ್ತ್ರೀಯು ಬರುವಳು)

ಕನ್ಯೆ—ಜನನೀಜನಕರೇ, ನಮಸ್ಕರಿಸುವೆನು. ನನ್ನನ್ನು ನಿರ್ಮಿಸಿದ ಕಾರಣವೇನು ?

ಈಶ್ವರ—ಭಕ್ತಿಯಿಂದ ಪ್ರಯತ್ನಿಸುವವರಿಗೆ ಫಲವು ಹೇಗೆ ಲಭಿಸುವದು ನೋಡು.

ಪಾರ್ವತಿ—ಪ್ರಯತ್ನವು ಕ್ರಮವಾಗಿ ನಡೆದರೆ, ದೈವಸಹಾಯವೂ ಒದಗಿ, ಫಲವಾಗಿಯೇ ಆಗುವದು. ಎಂತಹ ಸುಂದರನಾದ ಕನ್ಯೆ !

ಕನ್ಯೆ—ನನ್ನ ಕರ್ತವ್ಯವೇನು ಮಾತೆ ?

ಪಾರ್ವತಿ—ಬಾಲೇ, ನೀನು ಈ ವನದಲ್ಲೇ ತಪಸ್ಸು ಮಾಡುತ್ತಿರು. ಮುಂದೆ ನಹುಷನು ನಿನಗೆ ಪತಿಯಾಗುವನು. ಅಶೋಕಸುಂದರಿಯೆಂಬ ಹೆಸರಿನಿಂದ ಪ್ರಖ್ಯಾತಳಾಗು. ಹರಿಹರಾಭೇದವನ್ನು ಲೋಕಕ್ಕೆ ಬೋಧಿಸಲು ಕಾರಣಳಾಗು. ವೀರಪತಿವ್ರತೆಯಾಗು.

ಈಶ್ವರ—ದೇವೀ-ಇನ್ನು ನಡೆ; ನಾವು ಕೈಲಾಸಕ್ಕೆ ಹೊರಡುವ.

ಪಾರ್ವತಿ—(ಸ್ವಗತ) ನಾರದನ ಸಂಧಾನವು ವಿಫಲವಾಗುವದುಂಟೆ ? ಎಂತಹ ಅದ್ಭುತ ಲೀಲೆಗಳನ್ನು ನಡೆಸುವನು !

## ಪ್ರವೇಶ 2

[ಅರಣ್ಯಮಾರ್ಗ]

ನಾರದ—ಭಗವಂತನು ಅಪಾರಮಹಿಮನು. ನನ್ನ ಲೀಲೆಯು ಈವರೆಗೂ ನಿರ್ವಿಘ್ನವಾಗಿ ಪ್ರಕಾಶಿಸುತ್ತಾ ಬಂದಿದೆ. ಪಾರ್ವತಿಗೆ ಕನ್ಯಾರತ್ನವು ಜನಿಸಿದ್ದೀನೋ ಆಯಿತಲ್ಲ. ಇನ್ನು ಆ ಶ್ರೀಮನ್ ನಾರಾಯಣನನ್ನೇ ಆ ಕನ್ಯೆಗೆ ಪತಿಯಾಗುವಂತೆ ಮಾಡಬೇಕು. ನನ್ನ ನಾರದಲೀಲೆಯಲ್ಲಿ ಹರನನ್ನು ಮಾಧವನ

ನ್ನಾಗಿಯೂ ಹರಿಯನ್ನು ಅಳಿಯನನ್ನಾಗಿಯೂ ಮಾಡುತ್ತೇನೆ. ಇದರಿಂದ ಲಾದರೂ ವಿವೇಕವನ್ನು ಪಡೆದು, ಶಿವಭಕ್ತರೂ ವಿಷ್ಣುಭಕ್ತರೂ ತಮ್ಮ ತಮ್ಮ ಈರ್ಷಾಸೂಯೆಗಳನ್ನು ತ್ಯಜಿಸಿ, ಅನ್ಯೋನ್ಯದಿಂದ ಕಲೆತು ಸಂತೋಷಿಸಲಿ. ಆ ವಿಷ್ಣುವನ್ನು ಹರನಿಗೆ ಅಳಿಯನನ್ನಾಗಿ ಹೇಗೆ ಮಾಡಲಿ? ಅದೇನೂ ಅಸಾಧ್ಯವಲ್ಲ ; ರಮಣಿಯನ್ನು ಕೊಡಿಸುತ್ತೇನೆ ; ಬರುವೆಯಾ ನಾರಾಯಣ ಎಂದರೆ ಸಾಕು ; ಹಲ್ಲುಬಿಡುತ್ತಾ ನನ್ನ ಹಿಂದೆಯೇ ನಾರಾಯಣನು ಓಡಿಬರುವನು. ಆದರೆ ತನ್ನ ಪತಿಗೆ ಅನ್ಯವನಿತೆಯೊರ್ವಳನ್ನು ಜತೆಮಾಡಿದನೆಂದು ತಿಳಿದರೆ, ಆ ಲಕ್ಷ್ಮಿಯು ನನ್ನ ಗೃಹಚಾರವನ್ನೇ ಬಿಡಿಸಿಬಿಟ್ಟಾಳು. ಇರಲಿ, ವಿಷ್ಣುವು ವಿಷ್ಣುವಾಗಿಯೇ ಇದ್ದು ಲಕ್ಷ್ಮಿಯೊಡನೆ ವೈಕುಂಠದಲ್ಲಿ ವಿಹರಿಸುತ್ತಲೇ ಇರಲಿ. ನನಗೋಸ್ಕರ ಉಪಾಯದಿಂದ ವಿಷ್ಣುವಿಗೆ ಹನ್ನೊಂದನೇ ಅವತಾರವನ್ನು ಕಾಣಿಸಿ, ಆ ಅವತಾರ ಪುರುಷನಾದ ವಿಷ್ಣುವಿಗೆ ಪಾರ್ವತಿಯ ಸುತೆಯನ್ನು ಸೇರಿಸಿಬಿಟ್ಟರೆ ಸಟ್ಟಗಾಗುವದು. ಆದರೆ ಒರ್ವ ತರುಣಿಗಾಗಿ ವಿಷ್ಣುವು ಅವತಾರವೆತ್ತಿದನೆಂದರೆ ಲೋಕವು ನಗುವುದಲ್ಲಾ. ಯಾವ ಮಹದುದ್ದೇಶವನ್ನು ಕಾಣಿಸಿ ವಿಷ್ಣುವಿಗೆ ಅವತಾರವೆತ್ತುವಂತೆ ಪ್ರೇರಿಸಲಿ ?

ದುಂಡರಾಕ್ಷಸ—ಲೋಕವೇ ನನ್ನ ದರ್ಶನಮಾತ್ರದಿಂದ ತಲ್ಲಣಿಸುತ್ತಿದೆ. ನಮ್ಮ ದೈತ್ಯವೀರರೆಲ್ಲಾ ನನಗೆ ಪಾದಾಕ್ರಾಂತರಾಗಿ ಬಿದ್ದಿರುವರು. ದೇವಾದಿಗಳಂತೂ ನನ್ನ ಹೆಸರನ್ನು ಕೇಳಿದಮಾತ್ರಕ್ಕೆ ಏಳುವದನ್ನೂ ಬೀಳುವದನ್ನೂ ಕಾಣದೆ ಪಲಾಯನಮಾಡುತ್ತಿರುವರು. ಎಲ್ಲರನ್ನೂ ಜಯಿಸಿ ಅದ್ಭುತವಾದ ದೈತ್ಯರಾಜ್ಯವೈಭವವನ್ನು ನಾನು ಅನುಭವಿಸುತ್ತಿರುವೆನು. ಆದರೂ ಒಂದು ಚಿಂತೆ ಮಾತ್ರ ನನ್ನನ್ನು ಉನ್ಮತ್ತನಂತೆ ಓಡಾಡಿಸುತ್ತಿರುವದು.

ನಾರದ—ಅದೃಷ್ಟವು ಕೂಡಿಬಂದರೆ ಹೀಗಲ್ಲವೆ ಅನಾಯಾಸವಾಗಿ ಉದ್ದೇಶಗಳು ಕೈಗೂಡುವವು. ಸಕಾಲಕ್ಕೆ ಬಂದನು, ಈ ಪುಣ್ಯಪುರುಷನು. ನನ್ನ ಪ್ರಯತ್ನಕ್ಕೆ ಇವನು ಸರಿಯಾದ ಧೀರನು. ಇರಲಿ, ಮಂತ್ರಪ್ರಯೋಗವನ್ನು ಮಾಡುವೆನು. ಏನು-ದೈತ್ಯಸಾರ್ವಭೌಮ, ಕುಶಲವೇ ?

ದುಂಡ—ಓಹೋ ! ನಾರದರೇನು ! ವಂದಿಸುವೆನು. ಇದೇನು, ಇಲ್ಲೀ ?

ನಾರದ—ರಾಜಧಾನಿಯಾದ ವೈಢೂರ್ಯಪುರವನ್ನು ಬಿಟ್ಟು ಸೀನೇತಕ್ಕೆ ಹೀಗೆ ಹೊರಟಿರುವೆ ?

ದುಂಡ—ನನಗೆ ತಕ್ಕ ವೈರಿಯನ್ನು ಅನ್ವೇಷಿಸುತ್ತಾ ಹೀಗೆ ಸಂಚರಿಸುವೆನು. ತಾವೋ ?

ನಾರದ—ತಕ್ಕವೈರಿಯು ಲಭಿಸಬೇಕೆಂದು ಹುಡುಕುತ್ತಾ ಸಂಚರಿಸುವ ನಿಮ್ಮಂತಹ ವೀರರನ್ನು ಎಲ್ಲೆಲ್ಲೂ ಹುಡುಕುತ್ತಾ ನಾನೂ ಸಂಚರಿಸುವೆನು.

ದುಂಡ—ನೀವು ಹುಡುಕುತ್ತಿರುವಂತಹ ವೀರನು ನಾನೇತಾನೇ ?

ನಾರದ—ನಿನಗೆ ವೈರಿಯು ಲಭಿಸಬೇಕೆಂಬ ಅಪೇಕ್ಷೆಯನ್ನು ಪ್ರಕಟಿಸುವಂತಹ ಶಕ್ತನೂ ನಾನೇತಾನೇ ?

ದುಂಡ—ಬಹು ಸಂತೋಷವಾಯಿತು, ತಮ್ಮ ಸಂದರ್ಶನದಿಂದ.

ನಾರದ—ಅಷ್ಟೇ ಮಾತ್ರ; ನಿನ್ನನ್ನು ನೋಡಿದಕೂಡಲೆ ನನಗಾದ ಆನಂದವನ್ನು ವರ್ಣಿಸಲಾರೆನು.

ದುಂಡ—ನನಗೆ ತಕ್ಕ ವೈರಿಯು ಯಾವನಿರುವನು, ನಾರದರೇ ?

ನಾರದ—ಸ್ನೇಹಿತರೂ ವಿಶ್ವಾಸಿಗಳೂ ಲಭಿಸುವದು ಕಷ್ಟವೇ ವಿನಾ ವೈರಿಗಳು ಲಭಿಸುವದು ಕಷ್ಟವೇ ?

ದುಂಡ—ಅಂತಿಂತಹ ಸಾಮಾನ್ಯ ವೈರಿಗಳಾದರೆ ಫಲವಿಲ್ಲ ನಾರದರೇ.

ನಾರದ—ಏತಕ್ಕೆ, ದುಂಡ ಸಾರ್ವಭೌಮ, ಸ್ವರ್ಗಾಧಿಪತಿಯಾದ ದೇವೇಂದ್ರನೇ ನಿನಗೆ ವೈರಿಯಾದರೋ ?

ದುಂಡ—ಛೀ, ಅನ್ಯರ ಪತ್ನಿಯನ್ನು ವಂಚನೆಯಿಂದ ರಮಿಸಿ ಸಹಸ್ರಾಕ್ಷನೆನ್ನಿಸಿ ಕೊಂಡ ಆ ಅಧಮನು ನನಗೆ ಸರಿಯೇ. ಅಪ್ಸರಸ್ತ್ರೀಯರ ಮಧ್ಯೆ ಕುಳಿತು ಸ್ತ್ರೀಯಂತೆ ನಾಟ್ಯವಿಲಾಸಗಳನ್ನು ನೋಡುತ್ತಾ ಇರುವದಕ್ಕೇ ಸರಿ; ಆ ಇಂದ್ರ.

ನಾರದ—ಹೋಗಲಿ, ಉಳಿದ ಅಷ್ಟದಿಕ್ಪಾಲಕರು ನಿನಗೆ ವೈರಿಯಾದರೋ; ಆಗ ಬಹುದಾದರೆ ಹೇಳು.

ದುಂಡ—ಯಾರು, ಅಗ್ನಿ ಯಮ ಕುಬೇರ ವರುಣ ಇತ್ಯಾದಿಗಳೇನು ? ಅವ ರೆಲ್ಲಾ ನಮ್ಮ ಆಸ್ಥಾನಮಂದಿರದ ಮುಂಭಾಗದಲ್ಲಿ ಅಂಜಲಿಬದ್ಧರಾಗಿ ನಿಲ್ಲುವದಕ್ಕೆ ಆರಂಭಿಸಿ ಅನೇಕ ವರ್ಷಗಳೇ ಆಯಿತು, ಅವರನ್ನಾತೇನು.

ನಾರದ—ಓಹೋ ! ಹಾಗೋ ! ಆದರೆ ಸೂರ್ಯನು ನಿನಗೆ ವೈರಿಯಾದರೋ ?

ದುಂಡ—ಪಾಪ, ಹೊಟ್ಟೆಗೆ ಎರಡು ಚಕ್ರದ ಒಂದು ರಥಕ್ಕೇ ಗತಿಯಿಲ್ಲ; ಅಶ್ವಗಳೂ ವಿಷಮ, ಸಾರಥಿಯೂ ಹೆಳವ; ಇಂತಹ ಬಡಸೂರ್ಯನನ್ನು ಕಟ್ಟಿಕೊಂಡೇನು ಫಲ ?

ನಾರದ—ಲೋಕಮೋಹಕನಾದ ಚಂದ್ರನು ನಿನಗೆ ವೈರಿಯಾಗಬಹುದೋ ?

ದುಂಡ—ಅಯ್ಯೋ ಪಾಪ, ಆ ದರಿದ್ರ ಋಷಿಯಾದ ಅತ್ರಿಮುನಿಯ ಪುತ್ರನೋ; ಅವನೊಬ್ಬ ಶುದ್ಧ ಸ್ತ್ರೀಯೇ; ಗುರುತಲ್ಪ ಗಮನಮಾಡಿದ ಮಹಾದ್ರೋಹೀ—, ಕಳಂಕೀ, ಮೊದಲೇ ಕ್ಷಯರೋಗದಿಂದ ಸತ್ತೂ ಸತ್ತೂ ಜೀವಿಸುತ್ತಿದಾನೆ: ಅವನನ್ನು ಏನುಮಾಡಲಿ ನಾರದರೆ ?

ನಾರದ—ಹೋಗಲಿ, ಆ ಮನ್ಮಥನು ನಿನಗೆ ವೈರಿಯಾಗಬಹುದೆ ?

ದುಂಡ—ಮನ್ಮಥನನ್ನು ಪುರುಷನೆಂದು ತಿಳಿದಿರುವಿರೇನು ; ಅವನು ಸ್ತ್ರೀಸಮೂಹದಲ್ಲೇ ಬಿದ್ದು ಸಾಯುತ್ತಿರುವನು. ಅವನ ಪ್ರತಾಪವೆಲ್ಲಾ ವಿರಹದಿಂದ ಪರಿತಪಿಸುವ ಸ್ತ್ರೀಪುರುಷರ ಮೇಲೆಯೇ ಸರಿ. ಆ ದೋಷಿಯಾದ ಚಂದ್ರನ ಸ್ನೇಹಿತನೇ ತಾನೇ, ಆ ಪಾಪಿ ಮನ್ಮಥ. ನೆಟ್ಟಗೆ ಒಬ್ಬ ದರಿದ್ರಯೋಗಿಯನ್ನು ಜಯಿಸಲಾರದೆ ಅವನಿಂದ ಸುಡಲ್ಪಟ್ಟು ಭಸ್ಮನಾದ ರಣಹೇಡಿ ; ಸರಿಯಾದ ಒಂದು ಬಾಣಕ್ಕೇ ಗತಿಯಿಲ್ಲ ; ಬಾಡಿಹೋಗುವ ನಿರುಪಯೋಗವಾದ ಬರೀ ಪುಷ್ಪಬಾಣ, ಅವನಿಗಿರುವದು ; ಛೀ-ಏನೆಂದು ತೋರಿತು ನಿಮಗೆ ?

ನಾರದ—ಆ ಲೋಕಸೃಷ್ಟಿಗೆ ಯಜಮಾನನಾದ ಬ್ರಹ್ಮನೇ ನಿನಗೆ ವೈರಿಯಾದರೆ ಆಗಬಹುದೋ ಹೇಳು ?

ದುಂಡ—ಅಯ್ಯೋ ಪಾಪ ! ಶುದ್ಧ ವೈದಿಕಬ್ರಾಹ್ಮಣ, ಅವನಮೇಲೆಯೇ ನನ್ನ ಪ್ರತಾಪ ; ನಾನು ಬ್ರಾಹ್ಮಣರ ಮೇಲೆ ಕೈಮಾಡಲಾರೆ ; ಹಿಂದೆ ನಮ್ಮ ಶಂಬರಾಸುರನು ವಿನೋದಕ್ಕಾಗಿ ಆ ಬ್ರಹ್ಮನು ಓದುತ್ತಿದ್ದ ಹಳೆ ಪುಸ್ತಕಗಳನ್ನು ಬಲಾತ್ಕರಿಸಿ ತೆಗೆದುಕೊಂಡು ಓಡಿಹೋಗಲು ಎದ್ದುಹೋಗಿ ಅವನಿಂದ ಅದನ್ನು ಪುನಃ ತರಲಾರದೆ ಬಾಲಕರಂತೆಯೂ ಸ್ತ್ರೀಯರಂತೆಯೂ ರೋದಿಸುತ್ತಾ ಕುಳಿತುಕೊಂಡುಬಿಟ್ಟನು—ಹೇಡಿ ; ಈವತ್ತಿಗೂ ನಾಳೆಗೂ ಆ ಮಹಾನಾಚಾರಿಯಾದ ಆ ಹುಡುಗಿ ಶಾರದೆ, ಅವನಿಗೆ ವಿವೇಕವನ್ನು ಹೇಳಿಕೊಟ್ಟರೆ ಉಂಟು ; ಆ ಬ್ರಹ್ಮನೇನು—ಶುದ್ಧ ದೇವೀದಾಸ.

ನಾರದ—ಆದರೆ ನಿನಗೆ ತಕ್ಕ ವೈರಿಯನ್ನು ಇನ್ನೆಲ್ಲಿ ತರಲಿ ಹೇಳು ?

ದುಂಡ—ಏತಕ್ಕೆ ಮತ್ತೆ ? ವ್ಯರ್ಥನಾಗಿ ಆತ್ಮಪ್ರಶಂಸೆಯನ್ನು ಹೇಳಿಕೊಂಡಿರಿ. ನನ್ನ ಕೈಲಾಗುವದಿಲ್ಲವೆಂದು ಹೇಳಿ, ನನಗೆ ನಮಸ್ಕರಿಸಿ, ಹೊರಡಿ ಮತ್ತೆ ?

ನಾರದ—(ಸ್ವಗತ) ಲೋಕಪ್ರಳಯವನ್ನೇ ಮಾಡುವ ಈ ನಾರದನು ನಿನಗೆ ನಮಸ್ಕರಿಸಬೇಕೋ ! ನಿನ್ನ ವಿನಾಶಕ್ಕೆ ಈ ನಿನ್ನ ದುರಹಂಕಾರವೇ ಸೂಚನೆ. (ಪ್ರಕಾಶ) ಮಹಾರಾಜ, ಈಗ ಜ್ಞಾಪಕಕ್ಕೆ ಬಂದಿತು ; ಅವನೇ ನೋಡು, ನಿನಗೆ ಸಮನಾದ ವೈರಿಯು.

ದುಂಡ—ಅವನು ಎಂದರೆ ಯಾರು ? ಅವನ ಹೆಸರೇನು ?

ನಾರದ—ಅವನ ಹೆಸರನ್ನು ಕೇಳಿದರೆ, ನೀನು ಭಯಾನ್ವಿತನಾಗಿ, ಕಂಪಿಸಿ, ದಿಗ್ಭ್ರಾಂತನಾಗಿ, ಇಲ್ಲಿಂದ ಓಡಿಯೇ ಹೋಗಿಬಿಡುವೆ.

ದುಂಡ—ಅಂತಹ ಧೀರನೂ ಒಬ್ಬನುಂಟೋ ಈ ಬ್ರಹ್ಮಾಂಡದಲ್ಲಿ ! ಏತಕ್ಕೆ ವೃಥಾ ಈ ನಾನಾಡಂಬರ ? ಅವನ್ಯಾರು ಹೇಳಿ ನಾರದರೇ ?

ನಾರದ—ಅವನು ಸಾಮಾನ್ಯನಲ್ಲ ದೈತ್ಯರಾಜ ; ಹಿಂದೆ, ನಿಮ್ಮ ವಂಶದಲ್ಲೆ ಜನಿಸಿದ್ದ ಒಬ್ಬಾನೊಬ್ಬ ವೀರನನ್ನು,—ವೀರನು ಎಂದರೇನು—ನಿನ್ನಂತಹರು ಕೋಟಿ ಜನರಾದರೆ ಅವನೊಬ್ಬ ವೀರನು ; ಅಂತಹ ವೀರನನ್ನು, ಧ್ವಂಸಮಾಡಿ ಬಿಟ್ಟನು ?

ದುಂಡ—ಅವನಾರು, ಅಂತಹ ವೀರನು ! ನಮ್ಮ ವಂಶದಲ್ಲಿ ಜನಿಸಿದ್ದವನು ?

ನಾರದ—ಜಲಂಧರನೆಂಬ ಹೆಸರನ್ನು ಕೇಳಿಬಲ್ಲೆಯೋ ?

ದುಂಡ—ಅಯ್ಯೋ—ಪಾಪ— ಜಲಂಧರನೇ, ನಾನು ಕಾಣೆನೇ, ಅವನು ಮಹಾವೀರನೇ ! ಅವನನ್ನು ವಂಚನೆಯಿಂದ ಸಂಹರಿಸಿದವನು, ಆ ಹರನು—ಅವನೊಬ್ಬ ಶೂರನೋ, ಜಲಂಧರನನ್ನು ಸಂಹರಿಸುವದಕ್ಕೆ ಆ ಹರನ ಹಣೆಯಲ್ಲಿ ಏನು ಬರೆದಿತ್ತು ; ಆ ಅಯೋಗ್ಯ ಹರಿಯು ಮಧ್ಯೆ ಪ್ರವೇಶಿಸಿ, ದುರಾಚಾರವನ್ನು ಕೃತ್ರಿಮದಿಂದ ಆಚರಿಸಿ, ಅವನ ಪತ್ನಿ ವೃಂದೆಯನ್ನು ದೋಷಿಯನ್ನಾಗಿ ಮಾಡದಿದ್ದರೆ, ಹರನಗತಿ ಆಗಲೇ ಪೂರ್ತಿಯಾಗುತ್ತಿತ್ತು. ನಮ್ಮ ಭಸ್ಮಾಸುರನು ಓಡಿಸಿಕೊಂಡು ಹೋದಾಗ, ಎದುರಿಗೆ ನಿಂತು ಯುದ್ಧಮಾಡಲಾರದೆ, ಆ ಸ್ತ್ರೀವೇಷಧಾರಿಯಾದ ಹರಿಯು ಮರೆಬಿದ್ದು, ಅಡಗಿ ಕುಳಿತುಕೊಂಡನು, ರಣಹೇಡಿ.

ನಾರದ—ಇದೇನಯ್ಯ ! ಆ ಹರನು ತ್ರಿಪುರರನ್ನು ಭಸ್ಮಮಾಡಲಿಲ್ಲವೇ ?

ದುಂಡ—ಆ ಹರಿಯು ಬಾಣವಾಗದಿದ್ದರೆ, ಸುಡುತ್ತಿದ್ದದ್ದು ಕಾಣುತ್ತಿತ್ತು, ತ್ರಿಪುರರನ್ನು, ಆ ಭಿಕ್ಷುಕ !

ನಾರದ—ಏನು-ಹೀಗೆನ್ನುವೆ ? ಆ ದಕ್ಷಬ್ರಹ್ಮನ ಯಾಗವನ್ನೇ ಧ್ವಂಸಮಾಡಿದ ಧೀರನಲ್ಲವೆ, ಆ ಶಂಕರ ?

ದುಂಡ—ಕನ್ಯಾಪ್ರದಾನ ಮಾಡಿದ ಮಾವನೆಂಬ ಮರ್ಯಾದೆಯನ್ನೂ ಇಡದೆ, ಆ ದಕ್ಷನ ಯಾಗವನ್ನು ನಾಶಪಡಿಸಿದ, ಮರ್ಯಾದೆಗೆಟ್ಟ ಆ ಹರನು, ಎಂತಹ ಧೀರನು ಹೇಳಿ ? ಹರನು ಧೀರನೇ ಆಗಿದ್ದರೆ, ಅದೇ ದಕ್ಷನಿಂದ ಮರಳಿ ಯಾಗವನ್ನು ಆ ಹರಿಯು ಮಾಡಿಸಿದಾಗ, ನೋಡಿಕೊಂಡು ಹಲ್ಲುಹಲ್ಲು ಬಿಡುತ್ತಾ, ಕುಳಿತುಕೊಳ್ಳುತ್ತಿದ್ದನೇನು ? ಆ ಅರ್ಧನಾರಿ—

ನಾರದ—ಏನು, ದುಂಡಮಹಾರಾಜ, ಸಮುದ್ರ ಮಥನಮಾಡಿದಾಗ ಕಾಲಕೂಟ ವಿಷವು ಆವಿರ್ಭವಿಸಿ ಲೋಕವೆಲ್ಲಾ ತಲ್ಲಣಿಸಿಹೋಗುತ್ತಿರಲು, ಆಗ ಆ ಮಹಾದೇವನಲ್ಲವೆ, ಬಂದು ಆ ವಿಷವನ್ನು ತಾನು ಪಾನಮಾಡಿ, ಲೋಕವನ್ನು ಉದ್ಧರಿಸಿದನು ?

ದುಂಡ—ಶುದ್ಧ ಮಂದಮತಿ, ಏನೂ ಅರಿಯದ ದಡ್ಡನು, ಆ ಹರನು. ಸಮುದ್ರ ಮಥನಮಾಡಿದಾಗ ಆವಿರ್ಭವಿಸಿದವು, ಕಾಲಕೂಟ,—ಐರಾವತ,—ಕಲ್ಪವೃಕ್ಷ,—ಕಾಮಧೇನು,—ಚಿಂತಾಮಣಿ,—ಶ್ರೀ ಮಹಾಲಕ್ಷ್ಮಿ,—ಅಮೃತ,

ಇತ್ಯಾದಿ. ಇಂತಹ ದಿವ್ಯ ವಸ್ತುಗಳಲ್ಲಿ ಅತ್ಯುತ್ತಮವಾದವುಗಳನ್ನೆಲ್ಲಾ ಇಂದ್ರನು ಆಕ್ರಮಿಸಿಬಿಟ್ಟನು. ಲೋಕಸುಂದರಿಯಾದ ಲಕ್ಷ್ಮಿಯನ್ನು ವಿಷ್ಣುವು ತೆಗೆದುಕೊಂಡುಬಿಟ್ಟನು. ಇವನು ಹೇಗೂ ಮಂಕನೆಂದು ತಿಳಿದೇ, ಅವರೆಲ್ಲಾ ಅಂತಹ ದಿವ್ಯ ವಸ್ತುಗಳನ್ನು ತಾವು ಸ್ವೀಕರಿಸಿ, ಈ ಭಿಕ್ಷುಕನಿಗೆ, ಈ ದರಿದ್ರಯೋಗಿಗೆ, ಒಂದು ಬಟ್ಟಲುತುಂಬ, ಕಾಲಕೂಟ ವಿಷವನ್ನು ತುಂಬಿ ಕೊಟ್ಟುಬಿಟ್ಟರು, ಸತ್ತರೆ ಸಾಯಲಿ, ಇದ್ದರೆ ಇರಲಿ ಎಂದು. ಈ ಮೂರ್ಖನು, ಆ ಹರಿಯ ಮತ್ತು ದೇವತೆಗಳ ಕಪಟವನ್ನರಿಯದೆ, ಆ ವಿಷವನ್ನೆ ಪಾನಮಾಡಿಬಿಟ್ಟನು. ಅವಿವೇಕದಿಂದ ವಿಷಪಾನ ಮಾಡಿದರೆ, ಲೋಕೋದ್ಧಾರವನ್ನು ಏನುತಾನೆ ಮಾಡಿದಂತಾಯಿತು ?

ನಾರದ—ಆದರೆ ಆ ಹರನು ನಿನಗೆ ಸಮನಾದ ವೈರಿಯಲ್ಲವೇನು, ದುಂಡರಾಜ ?

ದುಂಡ—ಛೀ—ಅವನ್ಯಾವ ಧೀರನೆಂದು ತಿಳಿದಿರುವಿರಿ. ಗುರುದ್ರೋಹಿಯಾದ, ಆ ದೋಷನಿಧಿ, ಕ್ಷಯರೋಗಿ ಚಂದ್ರನು, ಆ ಹರನಿಗೆ ಪರಮಗುರು ; ಆ ಕಳಂಕಿಯನ್ನು ಶಿರಸ್ಸಿನಮೇಲೆಯೇ ಹೊತ್ತಿರುವನು. ನಾಲದುದಕ್ಕೆ ದೇವಲೋಕಕ್ಕೆ ವಂಚಿಸಿ ಭೂಲೋಕಕ್ಕೆ ಕದ್ದು ಓಡಿಬಂದ ಆ ಶಿಶುಘಾತಕಿ ಗಂಗೆ-ಸ್ತ್ರೀಸಾಮಾನ್ಯಳು ; ಅಂತವಳನ್ನು ಹೊತ್ತುಕೊಂಡೇ ತಿರುಗುವನು, ಲಜ್ಜಾವಿಹೀನನಾಗಿ. ಇವನಿಷ್ಟು ಅವಳನ್ನು ತಲೆಯಮೇಲೆ ಹೊತ್ತು ತಿರುಗಿದರೂ, ಆ ಗಂಗೆ, ತನ್ನ ದುರ್ಮಾರ್ಗವನ್ನು ಬಿಡುವಳೇ ; ಯಾವನೋ ಒಬ್ಬ ಅಲ್ಪ ಭಗೀರಥರಾಜನ ಮಂತ್ರಕ್ಕೆ ಮರುಳಾಗಿ, ಹರನನ್ನು ತ್ಯಜಿಸಿ, ಆ ದರಿದ್ರರಾಜನನ್ನೇ ಹಿಂಬಾಲಿಸಿ, ಓಡಿಹೋದಂತಹ ಮಹಾ ದುರಾಚಾರದ ಚಪಲೆ ; ಅಂತಹ ಅಪವಿತ್ರಳಾದ ಗಂಗೆಗೆ, ಆವಾಸ, ಈ ಹರನ ಉತ್ತಮಾಂಗ ; ಎಷ್ಟೆಂದು ಹೇಳಲಿ, ನಾರದರೇ, ನಿಮ್ಮ ಹರನ ಪ್ರತಾಪ !

ನಾರದ—ನಿಜಾಂಶವನ್ನು ತಿಳಿದ ಮಹಾ ಜ್ಞಾನಿಯಲ್ಲವೆ ನೀನು, ಹೇಳು ಹೇಳು.

ದುಂಡ—ನೋಡಿ,-ನಿಮ್ಮ ಹರನಿಗೆ ಪುತ್ರರೋ, ಒಬ್ಬನು ತಂದೆಗೆ ಹುಟ್ಟಿ ತಾಯಿಯ ಸಂಬಂಧವಿಲ್ಲದವನು ; ಅವನಿಗೋ ಆರುಮುಖ ; ಅವಲಕ್ಷಣ. ಮತ್ತೊಬ್ಬನು ತಾಯಿಗೆ ಜನಿಸಿ ತಂದೆಯ ಸಂಬಂಧವಿಲ್ಲದವನು ; ಅವನಿಗೋ ಆನೆಯಮುಖ. ಹೆಂಡತಿಯಂತೂ ಚಂಡಿ, ದುರ್ಗಿ, ಕಾಳಿ ; ವಾಸವು ಸುಡುಗಾಡಿನಲ್ಲಿ, ಬೂದಿಯೇ ಅಲಂಕಾರ ; ಇಂತಹ ಅವಲಕ್ಷಣದ ಮುಕ್ಕಣ್ಣನು ನನಗೆ ಸರಿಯೆ—ಬಡಯೋಗಿ.

ನಾರದ—ಬ್ರಹ್ಮಾಂಡದೊಳಗಿರುವ, ಹೊರಗಿರುವ, ಎಲ್ಲಾ ವೀರಾದಿಗಳನ್ನು ಹೇಳಿ ಆಯಿತು. ಇನ್ನೊಬ್ಬನಿಧಾನೆ ; ಅವನನ್ನೂ ಬಿಟ್ಟರೆ, ಇನ್ನು ನಿನಗೆ ವೈರಿಗಳೇ ಇಲ್ಲ, ಈ ಸೃಷ್ಟಿಯಲ್ಲಿ ; ನಿಶ್ಚಯ.

ದುಂಡ—ಅವನ್ಯಾರು ? ಆ ಒಬ್ಬನು, ಅವನನ್ನೂ ಹೇಳಿಯೇಬಿಡಿ.

ನಾರದ—ಇನ್ಯಾರು, ಆ ಕ್ಷೀರಸಾಗರವಾಸಿ ಶ್ರೀಮಹಾವಿಷ್ಣುವು.

ದುಂಡ—ಇದುವರೆಗೆ ನೀವು ಹೇಳಿದ್ದರಲ್ಲಿ, ನಿಮಗೆ ಸ್ವಲ್ಪ ವಿವೇಕವಿತ್ತೆಂದು ನಾನು ಊಹಿಸಿದ್ದೆನು ; ಈಗ, ಆ ಹರಿಯ ವಿಷಯವನ್ನೆತ್ತಿದ ಮೇಲಂತೂ, ನಿಮ್ಮಂತಹ ಅಜ್ಞಾನಿಗಳು, ಅವಿವೇಕಿಗಳು, ಈ ಬ್ರಹ್ಮಾಂಡದಲ್ಲೇ ಸಿಕ್ಕಲಾರರೆಂದು ನಂಬಿಕೆ ಹುಟ್ಟಿತು.

ನಾರದ—ಇದೇನು ದುಂಡರಾಜ ಹೀಗೆನ್ನುವೆ ! ಲೋಕೇಶ್ವರನೂ, ಪುರುಷೋತ್ತಮನೂ, ಅಘಟನಘಟನಾಸಾಮರ್ಥ್ಯವಂತನೂ, ಸರ್ವಾಂತರ್ಯಾಮಿಯೂ, ಆದ ಆ ನಾರಾಯಣನು, ನಿನಗೆ ಸಮನಾದ ವೈರಿಯೆಂದು ನಾನು ಹೇಳಿದ್ದರಿಂದ, ನಾನು ದಡ್ಡನಾಗಿಬಿಟ್ಟೆನೇ ? ಅದೂ ನ್ಯಾಯವೆ. ಆತನ ಯೋಗ್ಯತೆಯೆಲ್ಲಿ ! ನೀನೆಲ್ಲಿ ! ಆ ವಿರಾಟ್ಸ್ವರೂಪನನ್ನು ನಿನಗೆ ಸಮನೆಂದು ಹೇಳಿದ್ದು, ನನ್ನ ದಡ್ಡತನವೇ ಸರಿ.

ದುಂಡ—ಆ ಹರಿಯು ನನಗೆ ತಕ್ಕ ವೈರಿಯೆಂದು ಹೇಳುವಿರಲ್ಲವೆ ; ನಾನು ಅವನಂತೆ ಕಳ್ಳನೆ, ಮೋಸಗಾರನೆ, ವಂಚಕನೇ, ಮಾಯಾವಿಯೇ, ದ್ರೋಹಿಯೇ, ಸ್ತ್ರೀಲಂಪಟನೆ, ಏನೆಂದು ಮಾತನಾಡುವಿರಿ ; ಅವನು ಕಪಟಕ್ಕೆ ತವರುಮನೆ, ಮೋಸಕ್ಕೆ ಜನ್ಮಭೂಮಿ.

ನಾರದ—ಅವನು ಎಷ್ಟೋ ದಿವ್ಯವಾದ ಅವತಾರಗಳನ್ನು ಧರಿಸಿ, ಭೂಭಾರವನ್ನು ಪರಿಹರಿಸಿ, ಪ್ರಪಂಚವನ್ನು ಉದ್ಧಾರಮಾಡಲಿಲ್ಲವೇ ?

ದುಂಡ—ಪತ್ನಿಯೊಡನೆ ವನಗಳಲ್ಲಿ ವಿಹರಿಸುವ ಆಸೆಹುಟ್ಟಿತು ; ರಾಮಾವತಾರದ ನೆಪದಿಂದ ಕಾಡುಗಳಲ್ಲಿ ಸೀತೆಯೊಡನೆ ವಿಹರಿಸಿದನು. ಹಾಲು ಮೊಸರು ಬೆಣ್ಣೆಗಳನ್ನು ತಿನ್ನುವ ಆಶೆ ಹುಟ್ಟಿತು ; ಕೃಷ್ಣಾವತಾರದ ನೆಪದಿಂದ ಕಂಡ ಕಂಡವರ ಮನೆಯ ಹಾಲು ಮೊಸರು ಬೆಣ್ಣೆಯನ್ನೆಲ್ಲಾ ಕದ್ದುತಿಂದನು ; ಕಣ್ಣಿಗೆಬಿದ್ದ ಗೋಪಿಯರೊಬ್ಬರನ್ನೂ ಅನುಗ್ರಹಿಸದೆ ಬಿಡಲೇ ಇಲ್ಲ. ನೀರಿನಲ್ಲಿ ಈಜಾಡುವ ಆಶೆಹುಟ್ಟಿತು ; ಮತ್ಸ್ಯಾವತಾರವನ್ನು ತಾಳಿದನು. ಇವನ ಪತ್ನಿ ಲಕ್ಷ್ಮಿಯು, ಇವನ ದುರಾಚಾರಗಳನ್ನು ಕಂಡು, ವೈಕುಂಠದಿಂದ ಹೊರಗೆ ನೂಕಿದಳು. ಆಗ ಬಾಲಬ್ರಹ್ಮಚಾರಿಯಂತೆ ನಟಿಸುತ್ತಾ ವಾಮನನಾಗಿ ಅಲೆದನು. ಆಗಲೂ ತನ್ನ ದುರ್ಬುದ್ಧಿಯನ್ನು ಬಿಡಲಿಲ್ಲ. ಆ ಬಲಿಯನ್ನು ಪಾತಾಳಕ್ಕೆ ಮೆಟ್ಟಿದನು. ಇವನಿಗೆ ಮೂರು ಹೆಜ್ಜೆ ಭೂಮಿಯನ್ನು ಕೊಟ್ಟಿದ್ದಕ್ಕೆ ಅವನಿಗೆ ಮಾಡಿದ ಪ್ರತ್ಯುಪಕಾರವನ್ನು ನೋಡಿದಿರಾ ! ಎಂತಹ ಕೃತಘ್ನನು ! ಕಂದಮೂಲಗಳನ್ನು ತಿನ್ನುವ ಜಿಹ್ವಾಚಾಪಲ್ಯವು ಬಂದು ಹಂದಿಯಾದನು. ವರಾಹನಾದನೆಂದೂ, ಮತ್ಸ್ಯನಾದನೆಂದೂ, ಕೂರ್ಮನಾದನೆಂದೂ, ಎಲ್ಲರೂ ನಗುವದಕ್ಕಾರಂಭಿಸಲು, ಆ ಅಪವಾದವನ್ನು ಪರಿಹರಿಸುವದಕ್ಕಾಗಿ, ಪರಶುರಾಮನೆಂಬ ಹೆಸರಿನಿಂದ ಶ್ರೋತ್ರಿಯ ಬ್ರಾಹ್ಮ

ಣನಾಗಿ ಹುಟ್ಟಿದನು ; ಬ್ರಾಹ್ಮಣಜನ್ಮವನ್ನು ಎಷ್ಟು ಚೆನ್ನಾಗಿ ಕಾಪಾಡಿದ ನೆನ್ನುವಿರಿ ನಾರದರೇ ! ಜನ್ಮದಾತೆಯಾದ ಮಾತೆಯ ಶಿರವನ್ನೇ ಛೇದಿಸಿ ದನು, ಕ್ಷತ್ರಿಯರನ್ನೆಲ್ಲಾ ನಿಷ್ಕರುಣೆಯಿಂದ ಸಂಹರಿಸಿದನು, ಶ್ರೋತ್ರಿಯ ಬ್ರಾಹ್ಮಣನು. ಹೀಗೆ ತನ್ನ ಆಶೆಗಾಗಿ ತಾನು ಅವತರಿಸಿ, ಮಾಡಬಾರದ ದುರಾಚಾರಗಳನ್ನು ಮಾಡಿದರೆ, ಪ್ರಪಂಚವನ್ನು ಉದ್ಧರಿಸುವದು ಹೇಗೆ ? ನಿಮ್ಮಂತಹ ದಡ್ಡರು, ಆ ಹರಿಯನ್ನು ಸ್ತುತಿಸಬೇಕಲ್ಲದೆ, ನಾನೇ—ಅವನ ಹಣೆಯಬರಹವಿಷ್ಟೇ ಎಂದು ನಿರ್ಣಯಿಸಿರುವವನು, ಅವನ ಬಲೆಗೆ ಬೀಳು ವೆನೇ ?

ನಾರದ—ಏನು, ಅವನ ಹಣೆಯಬರಹ, ನೀನು ಕಂಡಿರುವದು ?

ದುಂಡ—ಅವನ್ಯಾವದೊಡ್ಡವಸ್ತುವು ನಾರದರೇ ; ಶುದ್ಧ ಬಾಲಕನು ; ತನ್ನ ಕಾರ್ಯ ಸಾಧನಾಕಾಲವು ಬಂದರೆ, ಬಂಧುಗಳನ್ನೂ ನೋಡುವುದಿಲ್ಲ, ಧರ್ಮವನ್ನೂ ನೋಡುವುದಿಲ್ಲ, ಜನಕನಾಗಲಿ ಜನನಿಯಾಗಲಿ ಬಂಧನದಲ್ಲೇ ಹಾಕಿಸುವನು, ಸೋದರಮಾವನಾದರೂ ಸಂಹರಿಸುವನು, ಸೋದರಳಿಯನನ್ನೆ ಕೊಲ್ಲಿಸಿಬಿ ಡುವನು, ಕಲಹ ತಂದುಹಾಕಿ ತನ್ನವರನ್ನೇ ನಿಶ್ಶೇಷರನ್ನಾಗಿ ಮಾಡುವನು, ಸಮಯದಲ್ಲಿ ಭಿಕ್ಷೆಬೇಡುವದಕ್ಕೂ ಹಿಂತೆಗೆಯುವದಿಲ್ಲ, ಕಾರ್ಯಸಾಧನೆಗಾಗಿ ಅನ್ಯರ ಗೃಹದ್ವಾರವನ್ನು ಕಾಯುವದಕ್ಕೂ ನಾಚುವದಿಲ್ಲ, ಕಪ್ಪುತಿನ್ನುವ ದಂತೂ ಜಲಪಾನಮಾಡಿದಂತೆ, ಅನ್ಯರಪತ್ನಿಯರನ್ನು ಸ್ವಲ್ಪವೂ ಲಜ್ಜೆಯೇ ಇಲ್ಲದೆ ಸಂಗ್ರಹಿಸಿಕೊಂಡುಬಿಡುವನು, ತನ್ನ ಪತ್ನಿಯನ್ನು ಅನ್ಯರ ವಶ ಮಾಡಲು ಸಿದ್ಧನಾಗುವನು, ನಂಬಿದವರನ್ನು ನಾಶಮಾಡದೆ ಬಿಡನು, ಆಶ್ರಿತರಿಗೆ ಅನ್ನವಸ್ತ್ರಕ್ಕೂ ಕೊಡದೆ ವನವಾಸವನ್ನೇ ಮಾಡಿಸುವನು, ಧೀರ ನಂತೆ ನಿಂತು ಯುದ್ಧಮಾಡುವನೇನು ಹೇಡಿ, ಸಮಯಬಂದರೆ ಪ್ರಾಣ ಕ್ಕಾಗಿ ಸ್ತ್ರೀವೇಷವನ್ನೇ ಧರಿಸಿ ಕುಣಿದುಬಿಡುವನು, ಇಂತಿಂತಹ ಪರಮ ದ್ರೋಹೀ, ಆ ಹರೀ.

ನಾರದ—ಆಯಿತು, ಇನ್ನು ವೈರಿಗಳನ್ನು ಎಲ್ಲಿಂದತಾನೇ ತರಲಿ ; ಹರಿಹರಬ್ರಹ್ಮ ರನ್ನೇ ನೀನು ತಿರಸ್ಕರಿಸಿದ ಮೇಲೆ !

ದುಂಡ—ಅಯ್ಯೋ ಪಾಪ,—ನೀವುತಾನೇ ಏನು ಮಾಡಬಲ್ಲಿರಿ, ವೈರಿಗಳು, ಯುದ್ಧ, ಜಯ, ಧೀರತ್ವ, ಇಂತಹ ಪರಾಕ್ರಮಕ್ಕೆ ಸಂಬಂಧಿಸಿದ ಮಾತುಗಳು, ದರಿದ್ರಬ್ರಾಹ್ಮಣರಾದ ತಮಗೆತಾನೇ ಏತಕ್ಕೆ ; ತಂಬೂರಿಯನ್ನು ಧರಿಸಿ, ದೇವರನಾಮಗಳನ್ನು ಕೀರ್ತಿಸುತ್ತಾ, ಗ್ರಾಮದಿಂದ ಗ್ರಾಮಕ್ಕೆ ಸಂಚರಿ ಸುತ್ತಾ ಇರುವ, ಅಲ್ಪ ಋಷಿಗಳು ತಾವು ; ಹೋಗಲಿ, ಜಿತೋಸ್ಮಿ ಎಂದು ಹೇಳಿ, ಎಲ್ಲಿ, ನನ್ನ ಪಾದಗಳಿಗೆ ನಮಸ್ಕರಿಸಿ ಹೊರಡಿ, ಮುಂದೆ ಯಾರ ಮನೆಯ ಬಾಗಿಲಲ್ಲಾದರೂ ಪದ ಹಾಡುವದಕ್ಕೆ.

ನಾರದ—ಛೀ-ಅಯೋಗ್ಯ ! ನನ್ನನ್ನೇ ತಿರಸ್ಕರಿಸುವಷ್ಟಕ್ಕೆ ಬಂದೆಯಾ ?

ದುಂಡ—ನಿಮ್ಮ ಜನಕನನ್ನೇ ತಿರಸ್ಕರಿಸುವ, ನಿಮ್ಮ ಪಿತಾಮಹನನ್ನೇ ತಿರಸ್ಕರಿಸುವ, ಈ ಧೀರನಿಗೆ, ನೀನು, ಈ ತಂಬೂರಿಯ ಬಡದಾಸನು, ಒಂದು ಗಣನೆಯೇ ? ನೆಟ್ಟಗೆ ಒಬ್ಬ ವೈರಿಯನ್ನು ಹೊಂದಿಸಲಾರದ ನೀನು, ಕಲಹಪ್ರಿಯನಾಗುವದು ಹೇಗೆ ? ಹೊರಡು, ಹೊರಡು, ತಾಯಿಯಿಲ್ಲದ ತಬ್ಬಲಿ—

ನಾರದ—ಏನು ? ನಾನು ತಾಯಿಯಿಲ್ಲದ ತಬ್ಬಲಿಯೇ ?

ದುಂಡ—ಅಲ್ಲವೆಂದವರ್‍ಯಾರು ? ಯಾರು ನಿಮ್ಮ ತಾಯಿ,—ಎಲ್ಲಿ-ತೋರಿಸು ; ಅವಳ್ಯಾರು, ನಿನ್ನನ್ನು ಹೆತ್ತ ಹೆಂಗಸು, ಅವಳ ಹೆಸರೇನು ?

ನಾರದ—ಅದೇತಕ್ಕೆ ಹಾಗೆನ್ನುವೆ. ನಮ್ಮ ಜನಕನಿಗೆ ಪತ್ನಿಯೇ ಇಲ್ಲವೇನು ?

ದುಂಡ—ನಿಮ್ಮ ತಂದೆಗೆ ಒಬ್ಬಳು ಪತ್ನಿಯಿದ್ದಮಾತ್ರಕ್ಕೆ, ನಿನಗೆ ಮಾತೆಯಿದ್ದಹಾಗಾಯಿತೇನು ? ಆ ಶಾರದೆಗೂ ನಿನಗೂ ಸಂಬಂಧವೇನು ? ಅವಳೋ, ಹೆತ್ತ ತಂದೆಯನ್ನೇ ಮೋಹಿಸಿದ ಮಾನಹೀನೆ. ನಿಮ್ಮ ತಂದೆಯಂತೂ ಸ್ವಂತ ಪುತ್ರಿಯನ್ನೇ ಆಲಿಂಗಿಸಿ ಆನಂದಿಸುವ ಲಜ್ಜಾಹೀನನು. ನೀನು, ಆ ಬ್ರಹ್ಮನಿಂದ ಜನಿಸಿದವನು. ಆ ಬ್ರಹ್ಮನು ತಾನೇ ಏನು ; ಅವನಿಗೂ ಜನನಿಯೇ ಇಲ್ಲ ; ಅವನೂ ಪುರುಷಗರ್ಭಸಂಜಾತನು. ನಿನ್ನ ಯೋಗ್ಯತೆಯನ್ನು ನಾನು ಕಾಣೆನೆ ! ಸ್ವೇಛ್ಛಾಲಾಪಗಳನ್ನು ನಿಲ್ಲಿಸಿ, ನಮಸ್ಕರಿಸಿ, ಹೊರಡು.

ನಾರದ—(ಸ್ವಗತ) ಒಳ್ಳೆಯ ಸಂಕಟವು ಬಂದಿತಲ್ಲ, ನಾರಾಯಣ; ಏನೋ ಮಾಡಲು ಹೋಗಿ, ಏನೋ ಆಗಿಹೋಯಿತಲ್ಲ ! ಎಲ್ಲರನ್ನೂ ಅಂದು, ಆಡಿ, ಮುಗಿದು, ಈ ದೈತ್ಯನು ಈಗ ಪಟ್ಟಾಗಿ ನನಗೇ ಅಂಟಿಕೊಂಡು, ನನ್ನ ಗ್ರಹಚಾರವನ್ನೆ ಬಿಡಿಸುತ್ತಿದಾನಲ್ಲ ! ಇಂತಹ ಅವಿಧೇಯದೈತ್ಯನನ್ನು ನಾನು ಕಂಡೇ ಇರಲಿಲ್ಲ ! ಇರಲಿ (ಪ್ರಕಾಶ) ನನ್ನ ಯೋಗ್ಯತೆಯನ್ನು ನೀನೇನು ಬಲ್ಲೆಯೋ ದೈತ್ಯ ? ನಿನಗೆ ನಾನು ನಮಸ್ಕರಿಸಬೇಕೋ, ಅಯೋಗ್ಯ.

ದುಂಡ—ಮುಚು , ಮೌನವನ್ನು ವಹಿಸದಿದ್ದರೆ ಮಾನವನ್ನು ಕಳೆದುಬಿಟ್ಟೇನು ; ನಿನ್ನನ್ನು ವಂಚಿಸುವದಕ್ಕಾಗಿ ಆ ಬಾಲಕನಾದ ಮನ್ಮಥನು, ಸ್ತ್ರೀವೇಷವನ್ನು ಧರಿಸಿಬಂದರೆ, ಮಹಾಜಿತೇಂದ್ರಿಯನಾದ ನೀನು, ಬ್ರಹ್ಮಚಾರಿಯಾದ ನೀನು, ಆ ಸ್ತ್ರೀವೇಷದ ಮನ್ಮಥನನ್ನು ಹೆಗಲಿನಲ್ಲಿ ಹೊತ್ತು, ಮೂರಾವೃತ್ತಿ ನಿನ್ನ ಕುಟೀರವನ್ನು ಪ್ರದಕ್ಷಿಣೆಮಾಡಲಿಲ್ಲವೆ ? ಸ್ತ್ರೀಚಪಲಕ್ಕಾಗಿ. ಮತ್ತೊಂದು ಸಲ, ರಾಜಪುತ್ರಿಗೆ ಆಶೆಬಿದ್ದು, ವಾನರಮುಖದಿಂದ ಸಭೆಯಲ್ಲಿ ಅವಮಾನ ಪಡಲಿಲ್ಲವೆ ? ಕೃಷ್ಣನ ಭಾರ್ಯೆಯರನ್ನು ಆಶಿಸಿದಾಗ, ನಾನಿಲ್ಲದಕಡೆ ಒಬ್ಬಳನ್ನು ಸಂಗ್ರಹಿಸಿಕೊಂಡು ಹೋಗೆಂದು ಕೃಷ್ಣನು ಹೇಳಲು, ಅವನ ಪತ್ನಿಯರ ಮನೆಬಾಗಿಲಿಗೆಲ್ಲಾ ಶುನಕನಂತೆ ಅಲೆದಾಡಿ, ಕೃಷ್ಣನಿಲ್ಲದ ಸ್ಥಳವನ್ನೇ ಕಾಣದೆ, ಲಜ್ಜೆಹೊಂದಲಿಲ್ಲವೆ—?

ನಾರದ—ಇದೆಲ್ಲವನ್ನೂ ಯಾರು ಹೇಳಿದರು, ದುಂಡ, ನಿನಗೇ !

ದುಂಡ—ನಾನು ಯಾರೆಂದು ತಿಳಿದೆ; ಎಲಾ, ದರಿದ್ರಬ್ರಾಹ್ಮಣ, ಬ್ರಹ್ಮಚಾರಿಯಾದ ನೀನು, ನೆಟ್ಟಗೆ ಆ ಅತ್ರಿಯು ಪರ್ಣಶಾಲೆಗೆ ಹೋಗಿ, ಅಣ್ಣನ ಪತ್ನಿಯೆಂದು ಕೂಡಾ ಶಂಕಿಸದೆ, ನಿರ್ವಾಣದಲ್ಲಿ ಬಡಿಸಬೇಕೆಂದು ಆ ಮಹಾಪತಿವ್ರತೆ ಅನಸೂಯೆಯನ್ನು ನೀನು ಪ್ರಾರ್ಥಿಸಲಿಲ್ಲವೆ ? ನಿನ್ನನ್ನು ಆಕೆಯು ಸ್ತ್ರೀಯಾಗಿ ಮಾಡಿ, ನಾರದಿಯಾಗಿಮಾಡಿ, ತನ್ನ ಪತಿಯ ದಾಸ್ಯಕ್ಕೆ ಇಡಲಿಲ್ಲವೇ ? ನೀನು ಒಂದಲ್ಲ—ಎರಡಲ್ಲ—ಅರವತ್ತು ಮಕ್ಕಳನ್ನು ಪಡೆಯಲಿಲ್ಲವೆ ? ಹಂದಿಯಂತೆ. ಛೀ-ನಿರ್ಲಜ್ಜಾ, ನಿನ್ನನ್ನು ಸಂಸಾರಿಗಳು ನಂಬಿ ಮನೆಗೆ ಸೇರಿಸಬಹುದೇ ? ನೀನು ಶುದ್ಧ ನೀಚನು, ಅನೃತವಾದಿ.

ನಾರದ—ಏನುಮಾಡಲಿ, ಈ ಪ್ರಾರಬ್ಧಕ್ಕೆ ? ನನ್ನನ್ನು ಮನಸ್ವೀ ನಿಂದಿಸುತ್ತಿರುವನಲ್ಲಾ ! ಇವನಲ್ಲಿ ನನ್ನ ಆಟವೇನೂ ಸಾಗುವಂತಿಲ್ಲ. ಈ ದುಂಡನಿಂದ ನಾರದಲೀಲೆಗೆ ವಿಘ್ನಬರುವಂತಾಯಿತಲ್ಲ. ಪರಮಾತ್ಮ, ನನ್ನ ಬುದ್ಧಿ ಚಮತ್ಕಾರಗಳೆಲ್ಲಾ ಏನಾಯಿತು.

ದುಂಡ—ಏನು ಮಹದಾಲೋಚನೆಯನ್ನು ಮಾಡುವೆಯೋ, ಕೊಂಡಿಯಚೇಳೇ, ವಿಷಪುಷ್ಪವೇ, ಇಡು, ತುಂಬೂರಿಯನ್ನು ಬಿಚ್ಚಿ ಇಲ್ಲಿಟ್ಟು, ನನಗೆ ಮರ್ಯಾದೆಯಿಂದ ನಮಸ್ಕರಿಸು, ಹೋಗು, ಜೀವದಾನಮಾಡಿದೇನೆ. ಬ್ರಾಹ್ಮಣ, ನಿನ್ನನ್ನು ಸಂಹರಿಸಿದರೆ ಏನುಫಲ ? ಎಲ್ಲಾದರೂ ಜೀವಿಸು.

ನಾರದ—ಇನ್ನು ಸಹಿಸುವದಕ್ಕೆ ಸಾಧ್ಯವೇ ಇಲ್ಲ. ನನ್ನನ್ನು ಬೇಕಾದುದೇ ಅನ್ನು, ನಾನು ತಡೆಯಬಲ್ಲೆ ; ನನ್ನ ತಂಬೂರಿಯ ಪ್ರಸ್ತಾಪವನ್ನು ಯಾವಾಗ ಎತ್ತಿದೆ, ಆಗಲೇ ಬಂದಿತು ನೋಡು, ನಿನಗೆ ವಿಪತ್ತು. ನಿನ್ನನ್ನು ಇಲ್ಲೇ ಸುಟ್ಟು ಬೂದಿಮಾಡಿಬಿಡುತ್ತೇನೆ ನೋಡು, ಅಧಮ, ಉನ್ಮತ್ತ.

ದುಂಡ—ನೀನು ?

ನಾರದ—ಅಹುದು, ನಾನು.

ದುಂಡ—ಸುಟ್ಟು, ಬೂದಿಮಾಡಿಬಿಡುವೆಯೋ ?

ನಾರದ—ಸಂಶಯವೇಕೆ ? ಬೂದಿಮಾಡಿ, ನೀರಿನಲ್ಲಿ ಕದಡಿಬಿಡುವೆನು.

ದುಂಡ—ಆದರೆ, ನೀನೇ ನನ್ನ ಮಗನೋ, ನನ್ನ ಬೂದಿಯನ್ನು ಕದಡುವದಕ್ಕೆ ?

ನಾರದ—ಛೀ-ದುಷ್ಟ-ನಾಲಗೆಯನ್ನು ಹಿಡಿದು ಮಾತನಾಡು. ನಾನು ನಿನ್ನ-ಮಗನೇಕೆ ? ನಿನ್ನ ಭಾಗದ ಮೃತ್ಯುವೆಂದು ತಿಳಿ.

ದುಂಡ—ಈ ದರಿದ್ರಬ್ರಾಹ್ಮಣ, ಈ ನಿರ್ಗತಿಕ, ಈ ಬಡಋಷಿ, ನನ್ನ ಭಾಗದ ಮೃತ್ಯುವಂತೆ ; ಅಹ್ಹಹ್ಹಾ ! ಹುಚ್ಚ ! !

ನಾರದ—ಬಾ, ಈಚೆಗೆ ಬಾ, ಹೀಗೆಬಾ ; ನೋಡು, ನಾರದನ ಪರಾಕ್ರಮವನ್ನಾದರೂ. ನಿನಗೆ ತಕ್ಕ ವೈರಿಯು ನಾನೇಸರಿ.

ದುಂಡ—ಹರಿಹರಬ್ರಹ್ಮಾದಿಗಳೇ ನನಗೆ ಸಮನಲ್ಲದಿರುವಾಗ, ನೀನು, ಈ ಮಶಕ, ಒಂದು ಬಡಸೊಳ್ಳೆ, ನನಗೆ ಈಡಾಗುವೆಯಾ ?

ನಾರದ—ನೋಡುವದಕ್ಕೆ ಸೊಳ್ಳೆಯು ಅಷ್ಟು ದೊಡ್ಡ ಪ್ರಾಣಿಯಲ್ಲವಾದರೂ, ಕಡಿಯುವದಕ್ಕೆ ಆರಂಭಿಸಿದಮೇಲೆ ಗೊತ್ತಾಗುವದು, ಅದರ ಸುಖ. ಬಾ, ಯುದ್ಧಕ್ಕೇ ನಿಲ್ಲು, ಏತಕ್ಕೆ ಹರಟುವೆ.

ದುಂಡ—ಈ ಬಡಬ್ರಾಹ್ಮಣನಮೇಲೆಯೋ ನನಗೆ ಯುದ್ಧ ! ಈ ತಂಬೂರಿಯೇ ನಿನ್ನ ದಿವ್ಯಾಸ್ತ್ರವೋ ! ಹುಚ್ಚು ಹಿಡಿಯಿತೇನು, ನಾರದ, ನಿನಗೆ ?

ನಾರದ—ಬಾರೋ-ಹೇಡಿ, ಅವರು ಹಾಗೆ, ಇವರು ಹೀಗೆ, ಎಂದು ತಿರಸ್ಕರಿಸುವಹಾಗಲ್ಲ ; ಬಾ, ನಿಲ್ಲು. ತೊಡೆಯನ್ನು ತಟ್ಟು. ಆಗಿಯೇಹೋಗಲಿ, ಕೈಗೆ ಕೈ—

ದುಂಡ—ಶೌರ್ಯರಹಿತನಾದ ದರಿದ್ರಬ್ರಾಹ್ಮಣ, ನಿನಗೇ ಇಷ್ಟು ಪರಾಕ್ರಮವು ಬಂದರೆ, ಇನ್ನು— !

ನಾರದ—ಬ್ರಾಹ್ಮಣನ ಪರಾಕ್ರಮದ ಪರಿಮಿತಿಯನ್ನು ನೀನೇನುಬಲ್ಲೆಯೋ ಮೂಢ ? ಪರಶುರಾಮನಿಗೇ ಗೊತ್ತು, ವಿಶ್ವಾಮಿತ್ರನಿಗೇ ಗೊತ್ತು, ವಸಿಷ್ಠನಿಗೇ ಗೊತ್ತು, ದೂರ್ವಾಸನಿಗೇ ಗೊತ್ತು ; ಬ್ರಾಹ್ಮಣರು ಉಳಿದ ಕಾಲದಲ್ಲಿ ಶಾಂತರಾಗಿ ಕಂಡರೂ, ನಿನ್ನಂತಹ ದುಷ್ಟಪಾಪಿಗಳು ತಲೆ ಎತ್ತಿ, ಸಾಧುಸಜ್ಜನ ಸಂತಾಪವಾಗುವಾಗ, ಮದಾಂಧರಾದ ನಿಮ್ಮಂತಹ ರಾಕ್ಷಸರು ಮೇರೆಮಿಾರಿ ಅಧರ್ಮಾಚರಣೆಗೆ ಬೀಳುವಾಗ, ಆ ಬ್ರಾಹ್ಮಣರು, ದರಿದ್ರಬ್ರಾಹ್ಮಣರು, ಧರಿಸುವ ಅವತಾರವೇ ಬೇರೆ ಇದೆ. ಬ್ರಾಹ್ಮಣನ ಮಹಿಮೆಯನ್ನು ಈಗ ತೋರಿಸುವೆನು, ಬಾ.

ದುಂಡ—ಎಲ್ಲಿ, ಬಾ, ಅದೇನು ತೋರಿಸು, ನಿನ್ನ ಮಹಿಮೆ. ಎಲಎಲಾ ಗಡ್ಡವೇ !

ನಾರದ—ಸಿದ್ಧನಾದೆಯೊ, ಯುದ್ಧಕ್ಕೆ ?

ದುಂಡ—ಸಿದ್ಧನಾಗಿದೇನೆ.

ನಾರದ—ಆದರೆ ಒಂದು ಮಾತು ; ನೀನು ಯುದ್ಧಮಾಡುವದಕ್ಕೆ ಮುಂಚೆ, ಈಗಲೇ ನೆಟ್ಟಗೆ ನಂದನವನಕ್ಕೆ ಹೋಗಿ ಬರಬೇಕು.

ದುಂಡ—ಏತಕ್ಕೆ ?

ನಾರದ—ಅಲ್ಲಿ ನನ್ನ ಪುತ್ರಿಯೊಬ್ಬಳಿದಾಳೆ. ಆಕೆಗೆ ಹೇಳಿಬರಬೇಕು.

ದುಂಡ—ಏನೆಂದು ?

ನಾರದ—'' ನಿಮ್ಮ ತಂದೆಯಾದ ನಾರದನು ಈಗ ನನ್ನೊಡನೆ ಯುದ್ಧಕ್ಕೆ ನಿಂತಿದಾನೆ. ಯಾರು ಸಾಯುವರೋ ಗೊತ್ತಿಲ್ಲ. ನೀನು ಮಾತ್ರ ಆ ಪಾರ್ವತಿಯು ಹೇಳಿದ ವರನನ್ನೇ ಪರಿಗ್ರಹಿಸು '' ಎಂದು ಹೇಳಿ ಹೊರಟು ಬಾ.

ದುಂಡ—ನೀನೇ ಹೋಗಿ ಏತಕ್ಕೆ ಹೇಳಬಾರದು ?

ನಾರದ—ಆಕೆಯು ಮುಖವನ್ನು ನೋಡಿದಕೂಡಲೆ ನನಗೆ ಯುದ್ಧದ ಆಶೆಯೇ ಹೋಗಿಬಿಡುವದು. ಅದಕ್ಕಾಗಿ.

ದುಂಡ—ನನಗೂ ಹಾಗೆಯೇ ಆದರೋ ?

ನಾರದ—ನಿನಗೆ ಆಗುವ ಅವಸ್ಥೆಯನ್ನು ನಾನು ಹೇಗೆ ತಿಳಿಯಲಿ ; ಪುತ್ರಿಯ ಸಂದರ್ಶನ ಮಾಡಿದಕೂಡಲೆ ತಂದೆಯಾದ ನನಗೇನೋ ಹಾಗೆಯೇ ; ಅಂದಮೇಲೆ ?

ದುಂಡ—ಆದರೆ ಇಲ್ಲೇ ಇರು ; ನನಗೆ ಹೆದರಿ ತಲೆತಪ್ಪಿಸಿಕೊಂಡು ಓಡಬೇಡ ; ನೀನು ಹೇಳಿದಂತೆ ಆ ತರುಣಿಗೆ ಹೇಳಿಬರುವೆನು.

ನಾರದ—ಎಚ್ಚರ, ಎಚ್ಚರ, ಆಕೆಯನ್ನು ನೋಡಿ ಅವಳ ರೂಪಕ್ಕೆ ಮೋಹಿಸಿ, ಯುದ್ಧವನ್ನೇ ಮರೆತು ನಿಂತುಬಿಟ್ಟೀಯೆ.

ದುಂಡ—ಛೀ-ಛೀ-ಅನ್ಯರ ತರುಣಿಯರನ್ನುನೋಡಿ ಆಶಿಸುವದಕ್ಕೆ, ನಾನೇನು ಇಂದ್ರನೇ-ಚಂದ್ರನೇ-ಹರನೇ-ಹರಿಯೇ-(ಹೋಗುವನು)

ನಾರದ—ಹೋಗು ನೀಚ ; ಸಧ್ಯಕ್ಕೆ ಈ ಪ್ರಾರಬ್ಧವು ತೊಲಗಿಹೋಯಿತು. “ ಬೀಸುವ ದೊಣ್ಣೆಯನ್ನು ತಪ್ಪಿಸಿಕೊಂಡರೆ ಸಾವಿರವರ್ಷ ಆಯುಸ್ಸು ” ಎಂಬಂತೆ ಈ ಹೆಮ್ಮಾರಿಯ ಕೈಯಿಂದ ಪಾರಾದೆನಲ್ಲಾ ; ಮುಂದೆ ದೇವರು ಮಾಡಿಸಿದಂತಾಗಲಿ. ಆಹಾ ! ನನಗೆ ಎಲ್ಲೂ, ಎಂದೂ, ಯಾರಿಂದಲೂ, ಹೀಗೆ ಅಮರ್ಯಾದೆಯಾಗಿಯೇ ಇರಲಿಲ್ಲ ; ಎಲಎಲಾ ದುಂಡ ! ದುಂಡ !! ಬಹು ಪ್ರಚಂಡ !!! ಇವನಿಗೆ ತಕ್ಕ ಪ್ರಾಯಶ್ಚಿತ್ತವು ಆ ಅಶೋಕಸುಂದರಿಯಿಂದಲೇ ಆದೀತು. ಆಗಲಿ, ನಾನೀಗಲೇ ವೈಕುಂಠಕ್ಕೆ ಓಡಿಹೋಗಿ, ವಿಷ್ಣುವಿಗೆ ಉಪಾಯದಿಂದ ರೇಗುವಂತೆ ಧೂಪವನ್ನು ಹಾಕಿ, ದುಷ್ಟದೈತ್ಯನಾದ ದುಂಡನ ಸಂಹಾರಕ್ಕಾಗಿ, ಹನ್ನೊಂದನೇ ಅವತಾರವೊಂದನ್ನು ಶ್ರೀಹರಿಯು ಧರಿಸುವಂತೆ ಮಾಡುವೆನು. ಆಶ್ಚರ್ಯ ! ಇದೇನು ! ವಿಷ್ಣುವು ಜನಿಸತಕ್ಕ ಸ್ಥಳವು, ಆ ಅವತಾರಪುರುಷನಿಗೆ, ಊರ್ವಶಿಯು ಅಜ್ಜಿಯಾಗುವಂತಹುದಾಗಬೇಕಲ್ಲವೆ ? ಈ ಸಂಕಟಕ್ಕೆ ಏನುಮಾಡಲಿ ? (ನೋಡಿ) ಏನು-ಅದಾರು-ಬರುವರು ? ಭಲ ನಾರದ ! ನೀನೇ ಸುಕೃತಿಯು. ಈಗ ಬರುತ್ತಿರುವ ಈ ಆಯು ಮಹಾರಾಜನು, ಪುರೂರವರಾಜನಿಂದ ಊರ್ವಶಿಯಲ್ಲಿ ಜನಿಸಿದವನು ; ಅಂದಮೇಲೆ ಈತನ ಧರ್ಮಪತ್ನಿಯ ಜಠರದಲ್ಲಿ ವಿಷ್ಣುವು ಅವತರಿಸುವದಾದರೆ, ಎಲ್ಲವೂ ನೆಟ್ಟಗೇ ಆಗುವದು. ಆಗಲಿ, ಇವನೇತಕ್ಕೆ ಬರುತ್ತಿರುವನೋ ತಿಳಿಯುವ.

ಆಯು—ನಾನು ಮಹಾನಿರ್ಭಾಗ್ಯನು. ವಯಸ್ಸು ಕಳೆಯುತ್ತಾ ಬಂದಿತು. ರಾಜ್ಯಕ್ಕೆ ಅರ್ಹನಾಗುವಂತಹ, ವಂಶವನ್ನು ಉದ್ಧಾರಮಾಡುವಂತಹ, ಸುಪುತ್ರನು ಬೇರೆ ಜನಿಸಲಿಲ್ಲ ; ಮಕ್ಕಳನ್ನು ಪಡೆಯದ ನನ್ನ ಬಾಳೀತಕ್ಕೆ ? ರಾಜನೆನ್ನಿಸಿಕೊಂಡು, ಅಷ್ಟೈಶ್ವರ್ಯದಿಂದ ವಿರಾಜಿಸುತ್ತಾ, ಸಂತಾನವಿಲ್ಲದೆ ಇರುವ

ಈ ಪಾಪಿಷ್ಠ ಬಾಳಿಗಿಂತಲೂ, ದಾರಿದ್ರ್ಯದಲ್ಲಿ ತಪಿಸುತ್ತಿದ್ದರೂ, ಮಕ್ಕಳನ್ನು ಪಡೆದು ಆನಂದಿಸುವ ಬಡಜನರ ಭಾಗ್ಯವೇ, ಎಷ್ಟೋ ಪೂಜ್ಯವಾದದ್ದು. ಏನುಮಾಡಲಿ ; ನನಗೆ ಸಂತಾನವು ಹೇಗೆ ಲಭಿಸುವದು ? ಯಾರ ಮರೆ ಹೊಗಲಿ, ಜಗನ್ನಾಯಕ—

ನಾರದ—ರೋಗಿಯು ಬಯಸುವದೂ, ವೈದ್ಯನು ಉಪದೇಶಿಸುವದೂ, ಈಗ ಒಂದೇ ಆಗುತ್ತದೆ ; (ಪ್ರಕಾಶ) ಇಗೋ, ಈ ನಾರದನ ಹಿತೋಪದೇಶವನ್ನು ಕೇಳು ; ಸಂತಾನವು ಲಭಿಸುವದು.

ಆಯು—ಆಹಾ ! ಪರಮಾತ್ಮನು ಅದ್ಭುತಚರಿತ್ರನು ! ಮಹಾಮಹಿಮ, ಆಜ್ಞೆಯಾಗಲಿ.

ನಾರದ—ನಿಮ್ಮ ಕುಲ ಗುರುಗಳಾದ ದತ್ತಾತ್ರೇಯ ಮುನಿಗಳನ್ನು ಭಕ್ತಿಯಿಂದ ಆರಾಧಿಸು ; ಅವರು ಅನುಗ್ರಹಿಸುವ ರಸಾಲಫಲವನ್ನು, ನಿನ್ನ ಪಟ್ಟಮಹಿಷಿಯು ಸೇವಿಸಲಿ ; ಶುಭವಾಗುವದು ; ನಾನು ಹೊರಡುವೆನು. (ಹೋಗುವನು)

ಆಯು—ಭಗವಂತನ ಕಟಾಕ್ಷವು ಬರುವದಾದರೆ, ಏನೇನುತಾನೇ ಆಗಲಾರದು ! ನಾನು ಹೋಗಿ, ಈಗಲೇ ನಮ್ಮ ಗುರುಗಳಾದ ದತ್ತಾತ್ರೇಯ ಮಹಾಮುನಿಗಳ ಮರೆಬೀಳುವೆನು : ಹೇಗಾದರೂ ಪುತ್ರಲಾಭವಾದರೆ, ನಾನೇ ಭಾಗ್ಯಶಾಲಿಯು.

## ಪ್ರವೇಶ 3

[ಸ್ಥಳ-ವೈಕುಂಠ]

(ನಾರಾಯಣನು ಯೋಗನಿದ್ರೆಯಲ್ಲಿರುವನು)

ನಾರದ—(ಸ್ತುತಿಸುತ್ತಾ ಬಂದು) ಇದು ನಿಶ್ಚಯವಾದ ನಿದ್ರೆಯೋ, ಅಥವಾ ಕಪಟ ನಾಟಕಕ್ಕೆ ಪೀಠಿಕಾರಚನೆಯೋ ಕಾಣೆನಲ್ಲಾ !

ವಿಷ್ಣು—ಇದೇ ಕಲಹ ನಾಟಕಕ್ಕೆ ಪೀಠಿಕಾರಚನೆ, ಅಲ್ಲವೆ, ನಾರದ ?

ನಾರದ—ಏನುದೇವ, ನಾನು ಕಲಹನಾಟಕಸೂತ್ರಧಾರಿಯೇ ?

ವಿಷ್ಣು—ಆದರೆ ನಾನು ಕಪಟನಾಟಕಸೂತ್ರಧಾರಿಯೇನು ?

ನಾರದ—ಸಂದೇಹವೇನು, ಪರಮಾತ್ಮ ?

ವಿಷ್ಣು—ಆಗಲಿ, ಕಲಹಪ್ರಿಯ, ಏನು ನಿನ್ನ ಆಗಮನೋದ್ದಿಶ್ಯವು ; ಬೇಗ ಹೇಳು ?

ನಾರದ—ಏನೆಂದು ಹೇಳಲಿ ದೇವ ; ಲೋಕೋದ್ಧಾರಕ್ಕಾಗಿ ನೀನು ದಶಾವತಾರಗಳನ್ನು ಧರಿಸಿದ್ದು, ಕೇವಲ ಹಾಸ್ಯಾಸ್ಪದನಾಗಿ, ದುಷ್ಟರು ನಿನ್ನನ್ನು ಮನಸ್ವೀ ನಿಂದಿಸುವದಕ್ಕೆ ಅವಕಾಶನಾಯಿತು. ನಮ್ಮಂತಹ ನಿನ್ನ ಭಕ್ತರು, ಇಂತಹ

ನಿಂದೆಗಳನ್ನು ಕಿವಿಯಲ್ಲಿ ಕೇಳಿಕೊಂಡು, ಹೊರಗೆ ಚರಿಸುವದಕ್ಕೇ, ತುಂಬ ಅಪಮಾನವಾಗಿಹೋಗಿದೆ.

ವಿಷ್ಣು—ನನ್ನನ್ನು ನಿಂದಿಸುವರೇ ? ಏನೆಂದು. ನಾನು ಅಂತಹ ಅನುಚಿತ ಕಾರ್ಯಗಳನ್ನು ಮಾಡಿದವನಲ್ಲವಲ್ಲ!

ನಾರದ—ನಾವು ಯಾವದನ್ನು ಉಚಿತವೆಂದು ಅರಿತಿರುವೆವೋ, ಆ ಕಾರ್ಯಗಳೇ ಅನುಚಿತಗಳಾಗಿ ಭಾವಿಸಲ್ಪಟ್ಟಿವೆ.

ವಿಷ್ಣು—ಅದು ಹೇಗೆ ನಾರದ ?

ನಾರದ—ನೀನು ಶುದ್ಧ ಭಿಕ್ಷುಕನಂತೆ, ನಾರಾಯಣ.

ವಿಷ್ಣು—ನಾನು ಎಲ್ಲಿ ಭಿಕ್ಷೆಬೇಡಿದೆನು! ಓಹೋ, ಬಲಿಯನ್ನು ಮೂರು ಹೆಜ್ಜೆ ಭೂಮಿಯನ್ನು ಯಾಚಿಸಿದೆನೆಂದೋ! ಅದು ದೇವತೆಗಳ ಹಿತಕ್ಕೂ, ಬಲಿಯನ್ನು ಅನುಗ್ರಹಿಸುವದಕ್ಕೂ ಅಲ್ಲವೆ ? ಅದರಲ್ಲಿ ಅಪಮಾನವೇನು ?

ನಾರದ—ನೀನು ಅನ್ಯರ ಗೃಹದ್ವಾರವನ್ನು ಕಾಯುವನಂತೆ!

ವಿಷ್ಣು—ಅಹುದು, ನನ್ನ ಭಕ್ತನಾದ ಬಲೀಂದ್ರನ ಪ್ರಾರ್ಥನೆಯಂತೆ, ಹಾಗೆ ಮಾಡಿದೆನು.

ನಾರದ—ನೀನು ಹಂದಿಯಂತೆ! (ವರಾಹ)

ವಿಷ್ಣು—ಅಹುದು, ಭೂದೇವಿಯನ್ನು ಉದ್ಧರಿಸುವದಕ್ಕಾಗಿ, ವರಾಹಾವತಾರ ಮಾಡಿದೆನು.

ನಾರದ—ದುಷ್ಟಮೃಗವಂತೆ, ನೀನು ಕಾಡುಮೃಗವಂತೆ!

ವಿಷ್ಣು—ಹಿರಣ್ಯಕಶಿಪುವಿನ ಮದವನ್ನು ಭಂಗಿಸಲು, ಆ ಅವತಾರವನ್ನೇ ಎತ್ತಿದೆನು! ತಪ್ಪೇನು ?

ನಾರದ—ನೀನು ಶುದ್ಧ ಅನೃತವಾದಿಯಂತೆ! ಕೊಟ್ಟ ಭಾಷೆಗೆ ತಪ್ಪಿದೆಯಂತೆ!

ವಿಷ್ಣು—ಎಲ್ಲೀ, ನಾನು ಯಾವಭಾಷೆಗೆ ತಪ್ಪಿದೆನು ; ಹೇಳು ?

ನಾರದ—ವೈಕುಂಠದಲ್ಲಿರುವವರಿಗೆ ಪುನರ್ಜನ್ಮವಿಲ್ಲವೆಂದು ನಿನ್ನ ಅಭಯ ; ಜಯವಿಜಯರು ನಿನ್ನ ಬಾಗಿಲನ್ನೇ ಕಾಯುತ್ತಿದ್ದವರು ; ಅಂತವರ ಗತಿ ಏನಾಯಿತು ನೋಡು!

ವಿಷ್ಣು—ಅವರು ಅಜ್ಞಾನದಿಂದ ಅಪರಾಧಿಗಳಾಗಿ, ತಮಗೆ ತಾವೇ ಕೇಡನ್ನು ತಂದುಕೊಂಡರು ; ಅದರಲ್ಲಿ ನನ್ನದೋಷವೇನಿದೆ ?

ನಾರದ—ನೀನು ಜನ್ಮಪಿತ್ತ ಜನನಿಯನ್ನೇ ನಿಷ್ಕರುಣೆಯಿಂದ ಕತ್ತರಿಸಿದೆಯಂತೆ; ಸ್ವಧರ್ಮವನ್ನು ಬಿಟ್ಟು, ಅನ್ಯಧರ್ಮವನ್ನು ಆಶ್ರಯಿಸಿ, ಅನರ್ಥವನ್ನು ಉಂಟುಮಾಡಿದೆಯಂತೆ.

ವಿಷ್ಣು—ಎಲಎಲಾ ! ಪಿತೃವಾಕ್ಯಪರಿಪಾಲನೆಯು ಪರಮಧರ್ಮವೆಂಬುದನ್ನು, ಲೋಕಕ್ಕೆ ಬೋಧಿಸುವದಕ್ಕಾಗಿ, ನಾನು ಪರಶುರಾಮನಾಗಿ, ನನ್ನ ಜನನಿಯನ್ನು ತಂದೆಯ ಆಜ್ಞೆಯಂತೆ ಕತ್ತರಿಸಿದೆನು ; ಬ್ರಾಹ್ಮಣನ ಮಹತ್ವವೇನೆಂಬುದನ್ನು, ರಾಜರಲ್ಲಿ ದುಷ್ಟರಾಗಿಯೂ, ಮದಗರ್ವಿತರಾಗಿಯೂ ಇರುವವರಿಗೆ ಬೋಧಿಸುವದಕ್ಕಾಗಿ, ಇಪ್ಪತ್ತೊಂದಾವೃತ್ತಿ ಕ್ಷಾತ್ರವನ್ನು ವಹಿಸಿ, ಅಂಥ ದುಷ್ಟರನ್ನು ಕೊಂದೆನು.

ನಾರದ—ಅಯ್ಯಾ, ನೀನು ಮೀನಂತೆ, ಕೂರ್ಮವಂತೆ, ಜಾರನಂತೆ, ಚೋರನಂತೆ, ನಂಬಿದವರಿಗೆ ವನವಾಸನಿತ್ತೆಯಂತೆ, ಮಾತಾಪಿತೃಗಳಿಗೆ ಬಂಧನನಾಯಿತಂತೆ, ಮಾವನನ್ನೆ ಕೊಂದ, ಸೋದರಳಿಯನನ್ನೆ ಕೊಲ್ಲಿಸಿದ ನಿಷ್ಕರುಣಿಯಂತೆ ; ಇದೂ ಇರಲಿ ; ಅಗ್ರಜನಿಗೆ ವಂಚಿಸಿ, ಸಹೋದರಿಯನ್ನು ಸನ್ಯಾಸಿಗೆ ಸ್ನೇಹಮಾಡಿಸಿದೆಯಂತೆ—;

ವಿಷ್ಣು—ಛೀ—ಛೀ—ಎಂತಹ ಮಾತು ! ಎಲ್ಲವೂ ಲೋಕಹಿತಕ್ಕಾಗಿ ನಡೆದಿದ್ದರೂ, ಇವುಗಳನ್ನು ದೋಷದಂತೆ ಎತ್ತಿ ಆಡಿದ ನೀಚನಾವನು,—ನಾರದ ?

ನಾರದ—ಇಷ್ಟೇ ಅಲ್ಲ ದೇವ ; ಕೈಹಿಡಿದ ಪತ್ನಿಯನ್ನು ಸಾಕಲಾರದೆ, ಒಂದಾವೃತ್ತಿ ಕಾಡುಪಾಲುಮಾಡಿದೆಯಂತೆ ; ಮತ್ತೊಂದುಬಾರಿ ಕಂಡವರಪಾಲು ಮಾಡಿದೆಯಂತೆ.

ವಿಷ್ಣು—ಮುಚ್ಚು, ನಾರದ, ಹೆಚ್ಚು ಹರಟಬೇಡ—

ನಾರದ—ಇವು ನನ್ನ ಮಾತುಗಳಲ್ಲ ದೇವ ; ನಿನ್ನ ವೈರಿಗಳು ಆಡುವ ಮಾತು.

ವಿಷ್ಣು—ಇಂತಹ ದುರ್ಭಾಷೆಗಳನ್ನಾಡುವ ಆ ನೀಚನಾವನು ಹೇಳು ?

ನಾರದ—ಇರುವನು, ಇರುವನು, ಕಾದುಕೊಂಡಿರುವನು ; ಸಮಯವನ್ನು—

ವಿಷ್ಣು—ಏತಕ್ಕಾಗಿ ?

ನಾರದ—ನಿನ್ನ ಪತ್ನಿಯನ್ನು ಅಪಹರಿಸುವದಕ್ಕಾಗಿ ;

ವಿಷ್ಣು—ನಾನಿರುವದೇತಕ್ಕೆ ಬಲ್ಲೆಯಾ ?

ನಾರದ—ಯೋಗನಿದ್ರಾಲೋಲನಾಗಿ, ಶೇಷಪರ್ಯಂಕದಲ್ಲಿ ಮಲಗಿ ನಿದ್ರಿಸುವದಕ್ಕೆ ; ಮಲಗು, ಮಲಗು, ನಾರಾಯಣ, ಚನ್ನಾಗಿ ನಿದ್ರಿಸು ; ಪತ್ನಿಯಾದರೂ ಕಂಡವರಪಾಲಾಗಲಿ ; ಭಕ್ತರಾದರೂ ಸಂಕಟಪಡಲ ; ಲೋಕವಾದರೂ ನಾಶವಾಗಲಿ ;

ವಿಷ್ಣು—ಆ ದುಷ್ಟನಾವನು ಹೇಳು ? ಈ ನನ್ನ ಚಕ್ರದಿಂದ ಅವನ ಶಿರವನ್ನು ಛೇದಿಸಿಬಿಡುವೆನು.

ನಾರದ—ನಿನ್ನ ಈ ಚಕ್ರಕ್ಕೆ ಬಗ್ಗುವ ಪಿಂಡವಲ್ಲ, ದೇವ, ಅವನು ಮಹಾಪ್ರಚಂಡನು ; ದಶಾವತಾರಮಾಡಿ, ದಾನವಾಂತಕನೆಂಬ ಬಿರುದು ಪಡೆದೆನೆಂದು ಗರ್ವಿಸುವ, ನಿನ್ನ ಆಡಂಬರವು, ಅವನಲ್ಲಿ ನಡಿಯುವದಿಲ್ಲ.

ವಿಷ್ಣು—ಆದರೆ ಅವನನ್ನು ಸಂಹರಿಸುವ ಬಗೆ ಹೇಗೆ ? ಅವನಾವನು ಹೇಳು ?

ನಾರದ—ನಿನಗೆ ತೋರಿದಂತೆ ಮಾಡು ; ನಾನು ಹೊರಡುವೆನು ; ಇದ್ದ ವಿಚಾರವನ್ನು ತಿಳಿಸಿದೆನು. ಮೊದಲೇ, ಕಲಹನಾಟಕಸೂತ್ರಧಾರಿಯೆಂದು ನಾಮಕರಣ ವನ್ನು ಮಾಡಿರುವೆ ; ನನಗೇತಕ್ಕೆ, ನಾರಾಯಣ, ನಾರಾಯಣ—

ವಿಷ್ಣು—ನಾರದ, ಬಾ, ಬಾ, ಹೋಗಬೇಡ ; ನೀನು ಹೇಳಿದಂತೆ ನಡೆಯುವೆನು.

ನಾರದ—ಆದರೆ ನನಗಾಗಿ ದಶಾವತಾರಗಳ ಜತೆಗೆ, ಏಕಾದಶಾವತಾರವೊಂದನ್ನು ಧರಿಸುವೆಯಾ ಹೇಳು ?

ವಿಷ್ಣು—ಯಾವ ಮಹದುದ್ದೇಶಕ್ಕಾಗಿ, ನಾನು ಅವತಾರವನ್ನೆತ್ತಬೇಕು, ನಾರದ ?

ನಾರದ—ದುಷ್ಟದೈತ್ಯಸಂಹಾರವೇ ಒಂದು ; ಸುಂದರಿಯನ್ನು ಪಡೆಯುವದೇ ಒಂದು; ನಾರದಲೀಲೆಯನ್ನು ಸಾಂಗಮಾಡುವದೇ ಇನ್ನೊಂದು ; ಈ ಮೂರು ಮಹ ದುದ್ದೇಶಗಳಿಗಾಗಿ, ನೀನು ಅವತಾರವನ್ನು ಧರಿಸು.

ವಿಷ್ಣು—ವಿಚಾರವೇನು ? ಸ್ಪಷ್ಟವಾಗಿ ಹೇಳು, ನಾರದ—

ನಾರದ—(ಕಿವಿಯಲ್ಲಿ ಹೇಳುವನು)

ವಿಷ್ಣು—ನಾರದ, ನೀನು ಮಹಾಚತುರನು ; ಆಗಲಿ ನಡಿ ; ನಡೆಯಲಿ, ನಾರದ ಲೀಲೆ.

ನಾರದ—ನಾರದನನ್ನು ಬದುಕಿಸುವದಕ್ಕಾಗಿ, ನೀನು ಅವತರಿಸಬೇಡ ; ಸುಂದರೀ ಮಣಿಯನ್ನು ಪಡೆಯುವ ಆಶೆಯಿದ್ದರೆ, ಹೊರಡು— ನನ್ನೊಡನೆ— (ಹೋಗುವರು)

## ಪ್ರವೇಶ 4 [ನಂದನವನದಲ್ಲಿ]

(ಅಶೋಕಸುಂದರಿ ತಪಸ್ಸು ಮಾಡುತ್ತಾ, ವಿಷ್ಣುಸ್ತುತಿ ಮಾಡುವಳು.)

ದುಂಡ—ಈ ವನವನ್ನು ಕಂಡುಹಿಡಿಯಲು ಬಹು ಪ್ರಯಾಸಪಟ್ಟೆನು ; ಇದೇ ನಂದ ನವನವು ; ನಾರದರು ಹೇಳಿದ ಆ ತರುಣಿಯು ಈ ವನದ ಯಾವ ಭಾಗದ ಲ್ಲಿರುತ್ತಿರುವಳೋ ಕಾಣೆನು.

(ಅಶೋಕಸುಂದರಿಯು ಧ್ಯಾನಮಾಡುವಳು.)

ದುಂಡ—(ಆಶ್ಚರ್ಯ) ಈಕೆಯೇ ನಾರದರು ಹೇಳಿದ ಲಲನಾಮಣಿಯು ; ಆಹಾ, ಎಂತಹ ಸುಂದರಿ ! ಎಷ್ಟು ಸಣ್ಣವಯಸ್ಸಿನ ಕೋಮಲಾಂಗಿಯಿವಳು !! ಈಕೆಯು ತನಗೆ ಅನುರೂಪನಾದ, ಆವನಾದರೊಬ್ಬ ಪತಿಯು, ದೊರೆಯ ಲೆಂದು, ಹೀಗೆ ತಪಸ್ಸನ್ನು ಮಾಡುತ್ತಿರುವಳೇ ; ಇಂತಹ ನವಮೋಹನಾಂ ಗಿಯನ್ನು ನೋಡಿದಮೇಲೆ, ನಾನು ಇವಳನ್ನು ಬಿಟ್ಟು ಹೋಗುವುದಾದರೂ

ಹೇಗೆ ? ಇರಲಿ, ಸುಂದರೀ—ನಿನ್ನ ತಪಸ್ಸಿಗೆ ಮೆಚ್ಚಿ, ಅನುಗ್ರಹಿಸಲು ಬಂದಿರುವೆನು, ಏಳು ಏಳು.

ಅಶೋಕಸುಂದರಿ—(ಎಚ್ಚರ) ನೀನಾರು ? ಹೋಗು, ಹೋಗು ;

ದುಂಡ—ರಮಣೀಮಣಿ, ಏತಕ್ಕಾಗಿ ಈ ಕ್ಲೇಶಕರವಾದ ತಪಸ್ಸನ್ನು ಆಚರಿಸುತ್ತಿರುವೆ?

ಅಶೋ—ನನಗೆ ಪತಿಯು ಶೀಘ್ರದಲ್ಲಿ ಲಭಿಸಲೆಂದು.

ದುಂಡ—ಸರಿಯೇ ; ಪತಿಯು ನಾನೇ ಬಂದಿರುವಾಗ, ಇನ್ನು ತಪವೇತಕ್ಕೆ ?

ಅಶೋ—ನನ್ನ ಪತಿಯು ಬೇರೆ ಇರುವಾಗ, ನೀನು ಹೇಗೆ ಪತಿಯಾಗುವೆ ?

ದುಂಡ—ಅಯ್ಯೋ, ಅಜ್ಞಾನೀ ! ನಿರಾಯಾಸವಾಗಿ ಈ ಪತಿಯು ಲಭಿಸಿರುವಾಗ, ಉಪೇಕ್ಷಿಸಿ ಮತ್ತಾವನನ್ನೋ ಪತಿಯೆಂದು, ಏತಕ್ಕೆ ವೃಥಾ ಹಂಬಲಿಸುವೆ ; ನಾನೇ ನಿನಗೆ ತಕ್ಕ ಪತಿಯು ; ಬಾ, ರಮಣೀ—

ಅಶೋ—ಒರ್ವನನ್ನು ಪತಿಯಾಗಿ ಭಾವಿಸಿದಮೇಲೆ, ಅನ್ಯಪುರುಷನನ್ನು ಕಣ್ಣೆತ್ತಿಯೂ ನೋಡುವಳಲ್ಲ ; ನಾನು ವೀರಪತಿವ್ರತೆಯೆಂದು ತಿಳಿ ; ಸುಮ್ಮನೆ ಹೊರಟು ಹೋಗು.

ದುಂಡ—ಹೋಗಲಿ, ರಮಣೀ, ನೀನಾರು ? ನಿನ್ನ ಹೆಸರೇನು ? ಯಾರನ್ನು ಪತಿಯಾಗಿ ವರಿಸಿರುವೆ ? ಅದನ್ನಾದರೂ ತಿಳುಹಿಸು ?

ಅಶೋ—ನಾನು ಪಾರ್ವತೀ ಪರಮೇಶ್ವರರ ಪುತ್ರಿಯು ; ಅಶೋಕಸುಂದರಿಯೆಂದು ನನ್ನನ್ನು ಕರೆಯುವರು ; ನಾನು, ಮುಂದೆ ಜನಿಸುವ ನಹುಷಮಹಾರಾಜ ನಿಗೆ ಪತ್ನಿಯಾಗಬೇಕೆಂದು, ನಮ್ಮ ಜನನೀಜನಕರ ಆಜ್ಞೆಯಾಗಿದೆ.

ದುಂಡ—ಅಯ್ಯೋ ! ಹುಚ್ಚುಬೇರೆ ಹಿಡಿದಿಲ್ಲವಷ್ಟೆ, ನಿನಗೆ ? ಎಂದೋ, ಮುಂದೆ ಜನಿಸುವ ಒಬ್ಬ ಅಲ್ಪನನ್ನು, ನೀನು ಈಗಲೇ ಪತಿಯೆಂದು ವರಿಸುವದರಿಂದ, ನಿನಗೆ ಆಗುವ ಆನಂದವಾದರೂ ಏನಿದೆ ? ಬೇಡ ಬಾ ; ನಾನು ಸಾಮಾ ನ್ಯನೆಂದು ಭಾವಿಸದಿರು ; ಮೇರುಶಿಖರಿಯಲ್ಲಿ, ವೈಢೂರ್ಯಪುರಿಯಲ್ಲಿ, ನನ್ನ ರಾಜಧಾನಿ ; ನಾನು ಪ್ರಪಂಚವನ್ನೇ ಗೆದ್ದಿರುವೆನು ; ತ್ರಿಮೂರ್ತಿಗಳೇ ನನಗೆ ನಡುಗುತ್ತಿರುವರು ; ಅದ್ಭುತವಾದ ವೈಭವವಿದೆ ; ಬಾ, ನನಗೆ ಪಟ್ಟ ಮಹಿಷಿಯಾಗಿದ್ದು, ನನ್ನೊಡನೆ ವಿಲಾಸಗಳನ್ನು ಅನುಭವಿಸು.

ಅಶೋ—ಬೇಡ, ಸಾರಿ ಸಾರಿ ಹೇಳುವೆನು ; ನನ್ನನ್ನು ಆಶಿಸಿ ಕೆಡಬೇಡ ; ನಾನು ಪತಿವ್ರತೆಯು ; ಅನ್ಯಪುರುಷರ ಸೌಂದರ್ಯಕ್ಕೂ, ಸೌಭಾಗ್ಯಕ್ಕೂ, ಸವಿಮಾ ತಿಗೂ, ಸೋತು, ಸತೀತ್ವವನ್ನು ಸೂರೆಮಾಡಿ, ರೌರವಾದಿ ನರಕಗಳನ್ನು ಸೇರುವ, ಅಧಮ ಸ್ತ್ರೀಯರಂತೆ ನನ್ನನ್ನು ತಿಳಿಯಬೇಡ ; ಹೋಗು.

ದುಂಡ—ಒಹೋ ಹೋ ಹೋ ! ಏನು, ನಿನ್ನ ಮಹಾ ಪಾತಿವ್ರತ್ಯ ! ಆ ಅಹಲ್ಯೆಗಿಂ ತಲೂ, ನೀನು ಮೀರಿದವಳೋ ? ಪತಿವ್ರತೆಯೆಂದು ಲೋಕವಿದಿತಳಾದ

ಅವಳೇ, ತನ್ನ ಪತಿಯಾದ ಗೌತಮುನಿದ್ದಾಗಲೇ, ಅವನನ್ನು ವಂಚಿಸಿ, ಆ ಇಂದ್ರನಮೇಲೆ ಮೋಹಗೊಂಡು, ಅವನನ್ನು ವರಿಸಿ ಆನಂದಿಸಿದಳು; ಅಂತಹ ಪ್ರಖ್ಯಾತಳಾದ ಪತಿವ್ರತೆ ಅಹಲ್ಯೆಯು ಹಾಡೇ ಹಾಗಿರುವಾಗ, ಇನ್ನು-ನಿಮ್ಮಂತವರದೇನು ಲೆಕ್ಕ.

ಅಶೋ—ಪತಿವ್ರತೆಯಾದ ಅಹಲ್ಯೆಯನ್ನು, ಆಕೆಯ ಪತಿಯ ವೇಷದಿಂದ ವಂಚಿಸಿ ರಮಿಸಿದ, ಆ ಇಂದ್ರನೆಂಬ ಅಧಮನು, ಕಂಡ ಗತಿಯನ್ನು ಬಲ್ಲೆಯಾ; ಗೌತಮನು ಕೊಟ್ಟ ಶಾಪದಿಂದ, ಶಚೀಪತಿಯು, ಶರೀರವೆಲ್ಲಾ ರಂಧ್ರಗಳಾಗಿ ಹೋಗಲು, ಅವಮಾನ ಅಸಹ್ಯಗಳಿಂದ, ಈಗಲೂ ಸಂಕಟಪಡುತ್ತಾನಲ್ಲವೆ; ಅಜ್ಞಾನದಿಂದ, ತನ್ನ ಪತಿಯೇ ಎಂಬ ಭ್ರಾಂತಿಯಿಂದ, ಆ ನೀಚನ ವಂಚನೆಯಿಂದ, ಆ ಅಹಲ್ಯೆಯು, ದೋಷಿಯಾದ ಮಾತ್ರದಿಂದಲೇ, ಅಷ್ಟಕ್ಕೇ ಎಷ್ಟೋವರ್ಷಗಳು ಶಿಲೆಯಾಗಿ ಬಿದ್ದಿದ್ದು, ಕಡೆಗೆ ಶ್ರೀರಾಮಾನುಗ್ರಹದಿಂದ ಜೀವಿಸಲಿಲ್ಲವೆ; ಇನ್ನು, ಬುದ್ಧಿಪೂರ್ವಕನಾಗಿಯೇ, ಅನ್ಯನನ್ನು ಸೇರಿದರೆ, ಅಂತಹ ಚಂಡಾಲಸ್ತ್ರೀಯರಿಗೆ, ಆಗುವ ದುರ್ಗತಿಯನ್ನು, ವರ್ಣಿಸುವದಕ್ಕೂ ಸಾಧ್ಯವೇ; ಮಹಾನಂದೆ ಎಂಬ ವೇಶ್ಯೆಯು, ಸ್ವಧರ್ಮದಲ್ಲಿರುತ್ತಾ, ಪತಿವ್ರತೆಯಾಗಿರಲು, ಅವಳನ್ನು ಕೆಣಕಲು ಹೋಗಿ, ಆಕೆಯ ಕೋಪದಿಂದ, ಇಂದ್ರನು ದಗ್ಧನಾಗಲಿಲ್ಲವೇ; ಪತಿವ್ರತೆಯರನ್ನು ಆಶಿಸುವದು ಕ್ಷೇಮವಲ್ಲ.

ದುಂಡ—ಮಹಾಮಹಿಮನಾದ ಬೃಹಸ್ಪತಿಯ ಪತ್ನಿ ತಾರೆಯೇ ಚಂದ್ರನನ್ನು ಬಿಡಲಿಲ್ಲ; ಅವನ ಸೌಂದರ್ಯಕ್ಕಾಗಿ, ಅವನನ್ನು ಸೇರಿದಳು; ಬುಧನೆಂಬ ಮಗನನ್ನೂ ಪಡೆದಳು; ಅಂದಮೇಲೆ ನೀನೇತಕ್ಕೆ ಹೀಗಾಡುವೆ, ಬಾ.

ಅಶೋ—ಗುರುತಲ್ಪಗಮನ ಮಾಡಿದ ಪಾತಕಕ್ಕಾಗಿ, ಆ ಚಂದ್ರನು ಈಗಲೂ, ಕ್ಷಯರೋಗದಲ್ಲಿ ಬಿದ್ದು ಸಾಯುತ್ತಿರುವನು; ಆ ಮಹಾಪತಿವ್ರತೆ ಅನಸೂಯೆಯನ್ನು ಪರೀಕ್ಷಿಸಲು ಹೋಗಿ, ತ್ರಿಮೂರ್ತಿಗಳೇ, ಅವಳಿಗೆ ಮಕ್ಕಳಾಗಿ ಬಿದ್ದಿದ್ದರು; ಆಕೆಯನ್ನು ಕೆಣಕಿದ ನಾರದ ಮುನಿವರ್ಯರೇ, ಸ್ತ್ರೀಯಾಗಿ, ಅರವತ್ತುಮಕ್ಕಳನ್ನೂ ಹೆತ್ತರು. ಸೀತಾಮಾತೆಯನ್ನು ಆಶಿಸಿದ ರಾವಣ ಚಕ್ರೇಶ್ವರನು, ಪರಿವಾರಸಹಿತ, ನಿರ್ನಾಮನಾಗಿ ಹೋದನು. ಪತಿವ್ರತೆಯಾದ ಸಾವಿತ್ರಿಯನ್ನು ಎದುರಿಸಲಾರದೆ, ಯಮಧರ್ಮರಾಯನೇ ಆಕೆಯ ಕೋರಿಕೆಯಂತೆ, ಪತಿಯನ್ನು ಬಿಟ್ಟುಕೊಡಬೇಕಾಯಿತು. ಪತಿವ್ರತೆ ದ್ರೌಪದಿಯನ್ನು ಕಂಡು, ತೊಡೆಯನ್ನು ತಟ್ಟಿದ ದುರ್ಯೋಧನನು, ಸಮಸ್ತ ಇಷ್ಟರೊಡನೆ ಸಾಯಲಿಲ್ಲವೆ. ವೃಂದಾದೇವಿಯನ್ನು ಆಶಿಸಿದ ಆ ಮಹಾವಿಷ್ಣುವೇ, ಆಕೆಯ ಶಾಪದಿಂದ ಗಂಡಕೀ ನದಿಯಲ್ಲಿ ಶಿಲೆಯಾಗಿ ನಿಂತನು. ವೃಥಾ ಕೆಡಬೇಡ, ಹೋಗು.

ದುಂಡ—ನೀನು ಏನೇನು ಹೇಳಿದರೂ, ನಿನ್ನನ್ನುಬೇರೆ ನಾನು ಬಿಡುವದಿಲ್ಲ. ಬಲಾತ್ಕರಿಸಿ ಹೊತ್ತುಕೊಂಡಾದರೂ ಹೋಗುವೆನು. ಹೆಂಗಸರು ಮೊದಮೊದಲು

ಹೀಗಾಡುತಿದ್ದು, ಕಡೆಗೆ ದೊಡ್ಡ ಹಳ್ಳಕ್ಕೇ ಬೀಳುವರೆಂಬುದನ್ನು ನಾನು ಬಲ್ಲೆನು.

ಅಶೋ—ಬೆಂಕಿಯಂತೆ ಪ್ರಜ್ವಲಿಸುವ ನನ್ನನ್ನು, ನೀನು ಮುಟ್ಟಿ ತೆಗೆದುಕೊಂಡು ಹೋಗಬಲ್ಲೆಯಾ? ಪತಿವ್ರತೆಯರು ಪ್ರಚಂಡನಾದ ಜ್ವಾಲಾಗ್ನಿಯೆಂದು ಕಾಣೆಯಾ?

ದುಂಡ—ಲಾವಣ್ಯದಗಣಿ, ಮೋಹನಾಂಗಿ, ಪರಮಸುಂದರಿ, ನೀನು ಜ್ವಾಲಾಗ್ನಿಯೇ?

ಅಶೋ—ಪತಿವ್ರತೆಯಾದವಳು, ತನ್ನ ಪತಿಗೆ ಲಾವಣ್ಯದ ಗಣಿಯಾಗುವಳು; ಅನ್ಯ ಪುರುಷರ ಪಾಲಿಗೆ ಬೆಂಕಿಯೆಂದು ತಿಳಿ.

ದುಂಡ—ಏತಕ್ಕೆ ಹರಟುತ್ತಿರುವೆ; ಎಲ್ಲೀ, ತೋರಿಸು, ನಿನ್ನ ಬೆಂಕಿಯುಜ್ವಾಲೆ; ನೋಡಿಯೇ ಬಿಡುವೆನು.

ಅಶೋ—ನೋಡು, ಮೂಢ—ಪತಿವ್ರತೆಯರು ಕಾಮುಕರ ಪಾಲಿಗೆ ಹೇಗಿರುವರೆಂಬುದನ್ನು ನೋಡು? (ದಗ್ಗೆಂದು ಉರಿಯು ಕಾಣಿಸುವದು)

ದುಂಡ—ನಿಜ, ಈಕೆಯು ಪತಿವ್ರತೆಯೇ ಸರಿ: ಒಂದುವೇಳೆ, ನಹುಷನೆಂಬ ನಿನ್ನ ಪತಿಯು ಸತ್ತುಹೋದರೆ, ಆಗಲಾದರೂ ಪ್ರೀತಿಯಿಂದ ನೀನೇ ನನ್ನನ್ನು ವರಿಸುವೆಯಾ, ಅದನ್ನಾದರೂ ಹೇಳು?

ಅಶೋ—ಛೀ, ಅಯೋಗ್ಯ, ನಹುಷನು ಮೃತನಾಗುವದೆಂದರೇನು? ಆ ನಹುಷನಿಂದಲೇ, ನಿನಗೆ ಮರಣವು ಸಿದ್ಧಿಸಲಿ; ಪತಿವ್ರತೆಯಾದ ನನ್ನ ಶಾಪವು, ಸುಳ್ಳಾಗಲಾರದು; ಹೋಗು, ಇನ್ನಿರಬಾರದು. (ಹೋಗುವಳು)

ದುಂಡ—ಎಂತಹ ತರುಣಿ, ಎಷ್ಟು ಸುಂದರಿ, ಏನುಲಾವಣ್ಯ, ಇವಳು ಸ್ವಾಧೀನಳಾಗಿದ್ದರೆ, ಎಷ್ಟು ಚನ್ನಾಗಿತ್ತು! ಇರಲಿ, ಇವಳಿಗೆ ಪ್ರೀತ್ಯಾಸ್ಪದನಾದ, ಆ ನಹುಷನೆಂಬುವನನ್ನೇ, ನಾನು ಕೊಂದುಬಿಟ್ಟರೆ, ಆಗಲಾದರೂ ನನ್ನನ್ನು ಸೇರುವಳೇ? ಹೇಗಾದರೂಮಾಡಿ, ಇವಳನ್ನು ಸಂಪಾದಿಸದೆ ಬಿಡುವದಿಲ್ಲ; ಇವಳಿಂದ ಕಡೆಗೆ ಸತ್ತರೂ ಸರಿಯೆ.

ನಾರದ—(ಬಂದು) ದುಂಡನು ಏನನ್ನೋ ಆಲೋಚಿಸುತ್ತಾ, ನಾನು ಬಂದಿರುವದನ್ನೂ ತಿಳಿಯಲಾರದವನಾಗಿರುವನು; ಅಶೋಕಸುಂದರಿಯ ಮೇಲಿನ ಮೋಹಾವೇಶವೇ ಈ ಸ್ಥಿತಿಯು; ಆಗಲಿ.

ದುಂಡ—ನಾನಿನ್ನು ಆ ತಂಬೂರಿಯ ಬಡದಾಸನ ಸಂಗಡ, ಯುದ್ಧವನ್ನು ಬೇರೆ ಮಾಡಬೇಕಲ್ಲವೆ; ಏನುಮಾಡಲಿ.

ನಾರದ—ಛೀ- ಅಯೋಗ್ಯ, ಉನ್ಮತ್ತ, ನಾನು ತಂಬೂರಿಯ ಬಡದಾಸನೆ?

ದುಂಡ—ಅಯ್ಯೋ, ಇನ್ನೇನುಗತಿ, ಈ ಬಡ ಋಷಿಯು ಇಲ್ಲೇ ಇರುವನಲ್ಲ ! ಮಹಾತ್ಮ, ಕ್ಷಮಿಸಿ, ನಾನು ಆ ತರುಣಿಯ ರೂಪಕ್ಕೆ ಮರುಳಾಗಿರುವೆನು.

ನಾರದ—ಆದರೆ, ವರಿಸುವಂತೆ ಕೇಳಿದೆಯಾ ?

ದುಂಡ—ಯಾವನೋ ನಹುಷನಂತೆ ; ಅವನನ್ನು ವರಿಸುವಳಂತೆ.

ನಾರದ—ಅಯ್ಯೋ, ಹೆಂಗಸರು ವರಿಸುವದೆಷ್ಟರಲ್ಲಿದೆ ; ವರಿಸಿರುವವರನ್ನು ತಿರಸ್ಕರಿಸುವದೆಷ್ಟರಲ್ಲಿದೆ ; ಸ್ವಲ್ಪ ಬಲಾತ್ಕರಿಸಿ ನೋಡಬೇಕಾಗಿತ್ತು.

ದುಂಡ—ಬಲಾತ್ಕರಿಸುವದೊಂದೇ ಅಲ್ಲ ; ನಾರದರೇ, ಎತ್ತಿಕೊಂಡೇ ಹೋಗಿಬಿಡ್ತುವೆನೆಂದು ಹೇಳಿದೆನು ; ಘೋರಾಗ್ನಿಯಂತೆ ಪ್ರಜ್ವಲಿಸುತ್ತಾ ನಿಂತುಬಿಟ್ಟಳು.

ನಾರದ—ಏನು ದುಂಡ ಸಾರ್ವಭೌಮ, ಪತಿವ್ರತೆಯಾದ ಅಹಲ್ಯೆಯನ್ನು ಇಂದ್ರನು ಬಿಡಲಿಲ್ಲ ; ತಾರೆಯನ್ನು ಚಂದ್ರನು ಬಿಡಲಿಲ್ಲ ; ವೃಂದೆಯನ್ನು ವಿಷ್ಣುವು ಬಿಡಲಿಲ್ಲ ; ಹೀಗಿರುವಾಗ, ಈ ಅಲ್ಪಳಾದ ಬಾಲಕಿಗೆ ಅಂಜಿ, ಅವಳನ್ನು ಬಿಟ್ಟುಬಿಟ್ಟೆಯಲ್ಲಾ !!! ನೀನು ಆ ಇಂದ್ರನಿಗಿಂತಲೂ. ಚಂದ್ರನಿಗಿಂತಲೂ ಆ ವಿಷ್ಣುವಿಗಿಂತಲೂ, ಹೇಡಿಯೋ ಅಂದಹಾಗಾಯಿತಲ್ಲವೆ ? ಇಷ್ಟೇಯೇನು ನಿನ್ನ ಪರಾಕ್ರಮ ?

ದುಂಡ—ನನಗೆ ಶಾಪವನ್ನು ಬೇರೆ ಕೊಟ್ಟಿರುವಳು.

ನಾರದ—ಏನೆಂದು ಶಾಪ ?

ದುಂಡ—" ನನ್ನ ಪತಿಯಾದ ನಹುಷನಿಂದ ನಿನಗೆ ಮರಣವಾಗಲಿ " ಎಂದು.

ನಾರದ—ಆದರೆ ಈಗೇನುಮಾಡುವೆ ?

ದುಂಡ—ಆ ನಹುಷನೆಂಬುವನು ಯಾರು ?

ನಾರದ—ಪುರೂರವರಾಜನಿಂದ, ಊರ್ವಶಿಯ ಗರ್ಭದಲ್ಲಿ ಜನಿಸಿದವನೇ, ಆಯು ಮಹಾರಾಜನು ; ಆ ಆಯುವಿನ ಪತ್ನಿ ಇಂದುಮತಿಯ ಗರ್ಭದಲ್ಲಿ ಬೆಳೆಯುತ್ತಿರುವವನೇ, ನಹುಷನೆಂಬುವವನು.

ದುಂಡ—ಆ ನಹುಷನನ್ನು ನಾನು ಸಂಹರಿಸುವದಕ್ಕೆ ಉಪಾಯವೇನು, ನಾರದರೇ ?

ನಾರದ—ನೀನು ಅಯೋಗ್ಯನು ; ನನ್ನನ್ನು ಮನಸ್ವೀ ನಿಂದಿಸಿರುತ್ತೀ ; ನಿನಗೆ ಉಪಕಾರಮಾಡಬಾರದು.

ದುಂಡ—ನನ್ನ ಸರ್ವಾಪರಾಧವನ್ನು ಕ್ಷಮಿಸಬೇಕು.

ನಾರದ—ಆದರೆ, ನನಗೆ ಸೋತೆನೆಂದು, ನನ್ನ ಕಾಲಿಗೆ ನಮಸ್ಕರಿಸು.

ದುಂಡ—ಇಗೋ, ನಾನು ತಮ್ಮಿಂದ ಪರಾಜಿತನಾದೆನು, ಕ್ಷಮಿಸಬೇಕು.

ನಾರದ—ಹೋಗಲಿ, ಬಾ, ದುಂಡರಾಜ, ನೀನು ಮಾಯಾರೂಪದಿಂದ ಅಡಗಿದ್ದು,

ಇಂದುಮತಿಯು ಗರ್ಭಗೃಹದಿಂದ, ಮಗುವು ಜನಿಸಿದ ತಕ್ಷಣವೇ ಹಾರಿಸಿ ಕೊಂಡು ಹೋಗಿ, ಅದನ್ನು ಕತ್ತರಿಸಿಹಾಕಿಬಿಡು.

ದುಂಡ—ಹಾಗೆ ಮಾಡಿದಮೇಲಾದರೂ, ಆ ರಮಣೀರತ್ನವು ನನಗೆ ಲಭಿಸುವಳೇ ?

ನಾರದ—ನಹುಷನನ್ನು ದುಂಡನು ಸಂಹರಿಸಿದರೆ, ದುಂಡನಿಗೆ ಲಭಿಸುವಳು ; ದುಂಡನನ್ನು ನಹುಷನು ಸಂಹರಿಸಿದರೆ, ನಹುಷನಿಗೆ ಲಭಿಸುವಳು ; ನೋಡು, ಒಂದುಕೈ.

ದುಂಡ—ಇನ್ನೆಲ್ಲಿ, ಆ ನಹುಷನ ಆಟ, ಇಗೋ, ಹೊರಟೆ. (ಹೋಗುವನು)

ನಾರದ—ಅಯ್ಯೋ, ಮೂಢ, ನಹುಷನನ್ನು ನೀನು ಸಂಹರಿಸುವದೆಂದರೇನು ; ಅಶೋಕಸುಂದರಿಯು ನಿನಗೆ ಲಭಿಸುವದೆಂದರೇನು ; ಮಹಾಮದೋನ್ಮತ್ತನಾದ ನಿನ್ನ ಗರ್ವವನ್ನು ಅಡಗಿಸುವದಕ್ಕೆ ಈ ನಾರದನು ಬದ್ಧಕಂಕಣನಾಗಿ ನಿಂತಿರುವಾಗ, ಇನ್ನು, ನಿನಗೆ ಉಳಿಗಾಲವೆಲ್ಲಿ ? (ಹೋಗುವನು)

---

## ತೃತೀಯಾಂಕ.

**ಪ್ರವೇಶ 1** [ರಾಜಮಾರ್ಗದಲ್ಲಿ]

ದುಂಡ—ನಾನೂ, ಈ ಆಯು ಮಹಾರಾಜನ ಗೃಹವನ್ನು ಸೇರಿ, ಬಹುಕಾಲವಾಯಿತು. ಆಯುವಿನ ಪತ್ನಿ ಇಂದುಮತಿಯು ಪೂರ್ಣ ಗರ್ಭಿಣಿಯಾಗಿರುವಳು. ಅವಳನ್ನು ನಾನಾಪ್ರಕಾರದಲ್ಲಿ, ನಾನಾವಿಕಾರರೂಪಗಳಿಂದ, ಎಂತೆಂತಹ ದುಷ್ಟ ಸಮಯಗಳಲ್ಲೆಲ್ಲಾ, ವಿಶೇಷವಾಗಿ ಭಯಪಡಿಸಿ ನೋಡಿದೆನು. ಅವಳ ಗರ್ಭಸ್ರಾವನಾಗುವದಕ್ಕಾಗಿ, ನಾನು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದವು. ಗರ್ಭವೂ ಪೂರ್ಣವಾಗಿ ವೃದ್ಧಿಯನ್ನು ಹೊಂದಿಹೋಯಿತು ; ಯತ್ನವಿಲ್ಲ. ಹೇಗೂ ನನ್ನ ವೈರಿಯಾಗುವ ನಹುಷನು, ಈಗಲೋ ಇನ್ನೊಂದು ಗಳಿಗೆಗೋ, ಜನ್ಮವನ್ನು ಧರಿಸುವನು, ಆಗಲಿ. ನಾನೂ ಸೂತಿಕಾಗೃಹದಲ್ಲೇ ಅಗೋಚರನಾಗಿ ಅಡಗಿದ್ದು, ಶಿಶುವು ಜನಿಸಿದ ತಕ್ಷಣವೇ, ಮಾಯೆಯಿಂದ ಅದನ್ನು ಎತ್ತಿಕೊಂಡುಹೋಗಿ, ಸಂಹರಿಸಿಬಿಡುವೆನು. (ಹೋಗುವನು)

[ಸಖಿಯರಿಬ್ಬರು ಪ್ರವೇಶಿಸುವರು]

1ನೇ ಸಖಿ—ಏನೇ ತಂಗಿ, ಮಹಾರಾಣಿಯವರು ಪ್ರಸವಿಸಿದರೇನು ?

2ನೇ ಸಖಿ—ಇನ್ನೇನು, ಈಗಲೋ, ಆಗಲೋ ; ಎಲ್ಲರೂ ಪ್ರಸವವನ್ನು ನಿರೀಕ್ಷಿಸುತ್ತಾ ಕಾದು ನಿಂತಿರುವರು.

1ನೇ ಸಖಿ—ಎಷ್ಟೋ ಕಾಲದಿಂದ ಸಂತಾನವಿಲ್ಲದೆ ಕೊರಗುತ್ತಿದ್ದ ನಮ್ಮ ಮಹಾರಾಜರು, ಇಂದಿಗೆ ಧನ್ಯರಾದರು.

2ನೇ ಸಖಿ—ಕುಲಗುರುಗಳಾದ ದತ್ತಾತ್ರೇಯರು ಅಭಿಮಂತ್ರಿಸಿ ಕೊಟ್ಟ ರಸಾಲ ಫಲವನ್ನು, ಮಹಾರಾಣಿಯು ಭಕ್ಷಿಸಿದಮೇಲೆ, ಪುತ್ರಸಂತಾನವಾಗುವದರಲ್ಲಿ ಸಂದೇಹವೇನು ?

1ನೇ ಸಖಿ—ಇದೇನು, ನಮ್ಮ ಮಾಲಿನಿಯು ಈಕಡೆಗೇ ಓಡಿಬರುತ್ತಿರುವಳು !

ಮಾಲಿನಿ—ಮಹಾರಾಣಿಯುವರು ಪ್ರಸವಿಸಿದರು, ಹೋಗಿ—

2ನೇ ಸಖಿ—ಎಂತಹ ಮಗು, ಮಾಲಿನೀ ?

ಮಾಲಿನಿ—ಗಂಡು ! ಗಂಡು !!

1ನೇ ಸಖಿ—ನೀನೆಲ್ಲಿಗೆ ಓಡಿಹೋಗುತ್ತಿರುವೆ ?

ಮಾಲಿನಿ—ಈ ಶುಭವಾರ್ತೆಯನ್ನು ಮಹಾರಾಜರಿಗೆ ವಿಜ್ಞಾಪಿಸುವದಕ್ಕೆ. (ಹೋಗುವಳು)

2ನೇ ಸಖಿ—ಅಕ್ಕ, ಬಾರೆ, ನಾವೂ ಸೂತಿಕಾಗೃಹದ ಬಳಿಗೆ ಹೋಗಿ ನೋಡುವ.

1ನೇ ಸಖಿ—ಬಾ-ಬಾ-ಸಂತೋಷಕಾಲ ; ಇದೇನು, ಮದನಮಂಜರಿಯು ಏತಕ್ಕೆ ಅವಸರದಿಂದ ಬರುವಳು !!

2ನೇ ಸಖಿ—ಏನೇ ಮದನಮಂಜರಿ, ಏನು ಸಮಾಚಾರ ?

ಮದನ—ಪ್ರಮಾದ, ಸಖೀ, ಪ್ರಮಾದ—

1ನೇ ಸಖಿ—ಏನೇ ಹುಚ್ಚಿ, ಮಹಾರಾಣಿಯು ಗಂಡುಮಗುವನ್ನು ಪ್ರಸವಿಸಿದರೆ, ಪ್ರಮೋದವಲ್ಲದೆ, ಪ್ರಮಾದವೆಲ್ಲಿಬಂತೇ ?

ಮದನ—ಜನಿಸಿದ ತಕ್ಷಣವೇ ಮಗುವು ಮಾಯವಾಗಿಬಿಟ್ಟಿರುವದಲ್ಲ ! ಏನುಗತಿ ! ಮಹಾರಾಜರಿಗೆ ಈ ದುಃಖದ ಸಂಗತಿಯನ್ನು ಏನೆಂದು ಹೇಳಲಿ. (ಹೋಗುವಳು)

2ನೇ ಸಖಿ—ಇದೇನಾಶ್ಚರ್ಯ ! ! ಈಗ ಜನಿಸಿದ ಮಗುವು ಆಗಲೇ ಮಾಯವಾಯಿತೆಂದರೆ, ಏನು ಹೇಳುವ !

1ನೇ ಸಖಿ—ಬಾ, ನಾವೂ ಹೋಗಿ, ನಿಜಾಂಶವೇನೆಂಬುದನ್ನು ತಿಳಿಯುವ. ದೈವ ವ್ಯಾಪಾರವು ಬಹು ವಿಚಿತ್ರ! (ಹೋಗುವರು)

ನಾರದ—ದುಂಡನು ಮಾಯೆಯಿಂದ ಮಗುವನ್ನು ಅಪಹರಿಸಿದನು. ಅವನ ಶತ್ರುವು ಅವನಕೈಗೇ ಸಿಕ್ಕಿರುವದು, ಇಷ್ಟಾದರೂ, ಆ ಶಿಶುವನ್ನು ಅವನು ಸಂಹರಿಸಬಲ್ಲನೇ ? ನೋಡಿಯೇ ಬಿಡುವೆನು. ಅಗೋ, ಆಯುವು ದುಃಖಾಕ್ರಾಂತನಾಗಿ, ಈಕಡೆಗೇ ಬರುತ್ತಿರುವನು, ಬರಲಿ.

ಆಯು—ಆಹಾ, ಇದೆಂತಹ ವಿಚಿತ್ರ !! ಈಗ ಜನಿಸಿದ ಮಗುವು, ಈಗಲೇ ಮಾಯ ವಾಯಿತಂತಲ್ಲ ; ಬಹುಕಾಲ ಮಕ್ಕಳಿಲ್ಲದೆ ವ್ಯಥೆಪಡುತ್ತಿದ್ದ ನನಗೆ, ದೈವ ವಶಾತ್, ಲಭಿಸಿದ ಈ ಪುತ್ರರತ್ನವೂ, ದಕ್ಕದೆ ಹೋಗುವದೆಂದರೆ, ನಾನೆಂ ತಹ ನಿರ್ಭಾಗ್ಯನು ; ನನಗೆ ಮರಣವಾದರೂ ಬರಬಾರದೆ--

ನಾರದ—ಮಹಾರಾಜ, ದುಃಖಿಸಬೇಡ, ಏನೋ ಒಂದು ಅದ್ಭುತ ವ್ಯಾಪಾರವನ್ನು ನಡೆಸುವದಕ್ಕಾಗಿ, ಆ ಜಗನ್ನಾಯಕನು, ನಿನಗೆ ಮಗನಾಗಿ ಅವತರಿಸಿರು ವನು. ತನ್ನ ಲೀಲೆಯನ್ನು ಪ್ರಕಟಿಸುವದಕ್ಕಾಗಿ, ಹೀಗೆ ಮಾಯವಾಗಿರು ವನು. ವೈರಿಯನ್ನು ಸಂಹರಿಸಿ, ಪತ್ನಿಯೊಡನೆ, ತನ್ನ ಪ್ರಾಯದಲ್ಲಿ, ನಿನ್ನ ಬಳಿಗೆ ಬಂದು ಸೇರುವನು. ಅವರೆಗೂ ಶಾಂತನಾಗಿರು, ನಾನು ಹೊರಡು ವೆನು. (ಹೋಗುವನು)

ಆಯು—ಆಹಾ, ಇದು-ಆ ಜಗನ್ನಾಯಕನ ಲೀಲೆಯೋ, ಅಥವಾ ಈ ಮಹಾನು ಭಾವರಾದ ನಾರದರ ಲೀಲೆಯೋ ಕಾಣೆನು. ಆಗಲಿ, ಸಂತೋಷಕಾಲವನ್ನು ನಿರೀಕ್ಷಿಸುತ್ತಾ, ಶಾಂತಿಯಿಂದ, ಭಗವಂತನನ್ನು ಆರಾಧಿಸುತ್ತಿರುವೆನು.

## ಪ್ರವೇಶ 3 [ಅಂತಃಪುರದಮುಂದೆ]

(ದುಂಡನ ಹೆಂಡತಿ ವಿದ್ಯುತಿ ಮತ್ತು ಸಖಿ)

ಸಖಿ—ಮಹಾರಾಣಿಯೇ, ಸಮಾಧಾನಳಾಗು ; ನಮ್ಮ ಸಾರ್ವಭೌಮರು, ಇಂದೋ ನಾಳೆಯೋ ಬರುವರು.

ವಿದ್ಯುತಿ—ನಾಥನನ್ನು ಅಗಲಿ ಬಹು ದಿನಗಳಾಯಿತು, ಸಖಿ—ವಿರಹವನ್ನು ಸಹಿಸ ಲಾರೆನಲ್ಲಾ—

ಸಖಿ—ತನಗೆ ತಕ್ಕ ವೈರಿಯನ್ನು ಅರಸುತ್ತಾ ನಮ್ಮ ದುಂಡ ಸಾರ್ವಭೌಮರು ಸಂಚರಿಸುತ್ತಿರುವರು.

ವಿದ್ಯುತಿ—ಜಯಾಪಜಯಗಳು ಸ್ಥಿರವಲ್ಲ. ವೈರಿಯನ್ನು ಅರಸಬೇಡಿರೆಂದು, ಆರ್ಯ ಪುತ್ರನಿಗೆ, ಹೇಳಿ ಹೇಳಿ ಸಾಕಾದೆನು. ಆದರೂ ಅವರಿಗೆ ಅದೇ ಆಶೆ. ವೈರಿ—ವೈರೀ—

ಸಖಿ - ಅಗೋ, ಅಲ್ಲಿ, ನೋಡು ದೇವೀ !

ವಿದ್ಯುತಿ—ಆಹಾ, ಆರ್ಯಪುತ್ರನು ಬಂದೇಬಿಟ್ಟನು.! ಅದೇನು ಕೈಯಲ್ಲಿರುವದು !!

ದುಂಡ—ದೇವೀ, ವೈರೀ—ವೈರೀ—

ವಿದ್ಯುತಿ—ವೈರಿಯ ಹುಚ್ಚು ಬಿಟ್ಟಿಲ್ಲ ; ಏನು, ನಾನು ವೈರಿಯೇ ?

ದುಂಡ—ಅಲ್ಲ, ದೇವೀ, ಇದು ನನಗೆ ವೈರೀ.

ವಿದ್ಯುತಿ—ಏನು, ಇದೊಂದು ಸಣ್ಣ ಶಿಶುವು, ನಿಮಗೆ ವೈರಿಯೇ ?

ದುಂಡ—ಅಹುದು. ಈ ಶಿಶುವೇ ನನ್ನ ಪ್ರಚಂಡವೈರಿ.

ವಿದ್ಯುತಿ—ಈ ಎಳೆಯ ಮೊಗುವಿನೊಡನೆ ನಿಮಗೆ ವೈರವೇ ?

ದುಂಡ—ಛೀ, ಅಜ್ಞಾನಿ, ಇದು ಎಳೆಯ ಮೊಗುವೇ? ವೈರಿಯನ್ನು ಎಳೆಯ ಮೊಗುವೆಂದು ಭಾವಿಸುವ, ನಿನ್ನ ಅವಿವೇಕವನ್ನು, ಏನೆಂದು ಹೇಳಲಿ ! ಬಾ ಇಲ್ಲಿ ; ಈ ಶಿಶುವನ್ನು ಪರಿಚಾರಕನ ಕೈಲಿ ಕೊಟ್ಟು, ಪಾಕಮಾಡಿಸಿ, ತೆಗೆಸಿಕೊಂಡು ಬಾ. ಆನಂದದಿಂದ ಈ ವೈರಿಯನ್ನು ತಿಂದು, ತೇಗಿಬಿಡುವೆನು.

ವಿದ್ಯುತಿ—(ಎತ್ತಿಕೊಂಡು) ಆಹಾ, ಇಂತಹ ಸುಂದರವಾದ ಮಗುವನ್ನು ಕತ್ತರಿಸುವದಕ್ಕೆ, ನಿಮಗೆ ಮನಸ್ಸು ಹೇಗೆ ಬರುವದು ?

ಸಖಿ—ಬಹು ಮುದ್ದಾಗಿದೆ ; ನಾವು ಸಾಕಿಕೊಳ್ಳುವ ದೇವೀ.

ವಿದ್ಯುತಿ—ಅಷ್ಟಲ್ಲದೆ, ಇದನ್ನು ಕೊಲ್ಲುವದೇನು ! ಎಂತಹ ಸುಂದರವಾದ ಪುರುಷ ಶಿಶುವು !! (ಮುದ್ದಾಡುವಳು)

ದುಂಡ—ಎಳೆಯ ಮಕ್ಕಳನ್ನು ಕಂಡರೆ, ಸ್ತ್ರೀಯರು ಅತಿಯಾಗಿ ಆನಂದಿಸುವರಲ್ಲದೆ ಕೊಲ್ಲುವರೇ ? ಇರಲಿ, ನಿಜಾಂಶವನ್ನು ತಿಳಿಸಿ ನೋಡುವೆನು. ದೇವೀ, ನಾನು ನಂದನವನಕ್ಕೆ ಹೋಗಿದ್ದನು. ಅಲ್ಲಿ ಓರ್ವ ಸುಂದರಿಯು ತಪಸ್ಸು ಮಾಡುತ್ತಿದ್ದಳು. ಅವಳ ಅಸದೃಶಲಾವಣ್ಯಕ್ಕೆ ಮೋಹಿತನಾಗಿ, ನನ್ನನ್ನು ವರಿಸುವಂತೆ ಬಲಾತ್ಕರಿಸಿದೆನು. ಸಮ್ಮತಿಸಲಿಲ್ಲ, ಆಕೆಯು ಅಗ್ನಿಯಂತೆ ಉರಿಯುತ್ತಾ ನಿಂತಳು.

ವಿದ್ಯುತಿ—ನಾನೊಬ್ಬಳೇ ಸಾಲದೇನೋ, ತಮ್ಮ ರೂಪುಲಾವಣ್ಯಕ್ಕೆ. ಅವಳೂ ಒಬ್ಬಳು ಬೇಕಾಯಿತಲ್ಲವೆ ? ಪಾಪ—ನಿಮ್ಮಂತಹ ಪರಸ್ತ್ರೀ ಕಾಮುಕರನ್ನು ಕಂಡರೆ, ಪತಿವ್ರತೆಯರು, ಹಾಗೆ ಉರಿಯುತ್ತಾ ನಿಂತುಕೊಳ್ಳುವದೇ ನ್ಯಾಯ.

ದುಂಡ—ನನಗೆ ಶಾಪವನ್ನು ಬೇರೆ ಕೊಟ್ಟಿರುವಳು. ಶಾಪವನ್ನು—, ಆಕೆಯು ದೊಡ್ಡ ಋಷಿ—

ವಿದ್ಯುತಿ—ಅದ್ದಿಯೇನು, ಪತಿವ್ರತೆಯರು, ಮಹಾ ಮಹಾ ಮುನಿಗಳ ತಪೋ ಬಲಕ್ಕಿಂತಲೂ, ಮೀರಿದ ಬಲವನ್ನು ಉಂಟಾಗಿರುವರು. ಅನ್ಯ ಪತ್ನಿಯರನ್ನು ಬಯಸುವ, ನಿಮ್ಮಂಥವರಿಗೆ ಶಾಪವು ನ್ಯಾಯವೇ. ಏನೆಂದು ಶಾಪವನ್ನು ಕೊಟ್ಟಿರುವಳು ?

ದುಂಡ—" ನಾನು ಮುಂದೆ ಜನಿಸುವ ನಹುಷನನ್ನು ಪತಿಯಾಗಿ ವರಿಸಿರುವೆನು, ನಾನು ಪತಿವ್ರತೆ, ನನ್ನನ್ನು ಬಲಾತ್ಕರಿಸಿದ್ದರಿಂದ, ನನ್ನ ಪತಿಯಾಗಿ ನಿಜಸುವ ನಹುಷನಿಂದಲೇ ನಿನಗೆ ಮರಣವಾಗಲಿ" ಎಂದು ಶಪಿಸಿರುವಳು.

ವಿದ್ಯುತಿ—ಎಂತಹ ಪ್ರಮಾದವನ್ನು ಮಾಡಿಕೊಂಡಿರುವಿರಿ !! ಆ ನಹುಷನೆಂಬು ವನು ನಿಮ್ಮನ್ನು ಕೊಲ್ಲದೆ ಬಿಡುವನೆ ? ಆ ಪತಿವ್ರತೆಯ ಶಾಪವು ಅನೃತ ವಾಗುವದೇ ?

ದುಂಡ—ಆ ನಹುಷನೆಲ್ಲಿ ಬಂದನೇ ಹುಚ್ಚೀ ; ಈ ನಹುಷನು ! ಇವನೇ—ನನ್ನನ್ನು ಸಂಹರಿಸುವ ವೈರಿ, ಇನ್ನೇನು, ಈ ಧೀರನು ನನ್ನನ್ನು ಕೊಂದುಬಿಡುವನು ; ನಾನು ಸತ್ತುಬಿಡುವೆನು ; ಆ ಪತಿವ್ರತೆಯ ವಾಕ್ಯವು ನಿಜವೇ ಆಗಿ ಬಿಡುವದು.

ವಿದ್ಯುತಿ—ದೈವವ್ಯಾಪಾರವನ್ನು ಕಂಡವರಾರು ? ಈ ಬಾಲಕನು ನಿಮ್ಮನ್ನು ಕೊಂದರೂ ಕೊಲ್ಲಬಹುದು ; ವಿಧಿಲಿಖಿತವನ್ನು ತಪ್ಪಿಸಲು ಸಾಧ್ಯವೇ ?

ದುಂಡ—ಇವನನ್ನು ಈಗ ನಾನು ಕೊಲ್ಲದೆ ಬಿಟ್ಟರೆ ಅಲ್ಲವೆ, ಮುಂದೆ ಇವನು ನನ್ನನ್ನು ಕೊಲ್ಲುವ ಯೋಚನೆ ; ಈ ವೈರಿಯನ್ನು ಬಲಿಯುವದಕ್ಕೆ ಬಿಡದೆ, ಈಗಲೇ ಸಂಹರಿಸುವೆನು.

ವಿದ್ಯುತಿ—ನಿಮ್ಮ ಅವಿವೇಕದಿಂದಲೇ ಇವನು ನಿಮಗೆ ವೈರಿಯಾದನು : ನಿಜವಾದ ನಿಮ್ಮ ವೈರಿಯು ಬೇರೆ ಇದಾನೆ.

ದುಂಡ—ಅದು ಹೇಗೆ ? ನನ್ನದೇನು ಅವಿವೇಕ ?

ವಿದ್ಯುತಿ—ಆ ತರುಣಿಯನ್ನು ನೋಡುವದಕ್ಕೆ ಏತಕ್ಕೆ ಹೋದಿರಿ ? ಆಕೆಯನ್ನು ಮೋಹಿಸಿ ಬಲಾತ್ಕರಿಸಿ ಶಾಪವನ್ನು ಪಡೆದುದೇತಕ್ಕೆ ? ಆ ಶಾಪದ ಕಾರಣ ದಿಂದ ಈ ಮಗುವು ವೈರಿಯಾದನೇತಕ್ಕೆ ?—ಇವೆಲ್ಲವನ್ನು ನೋಡಿದರೆ ಆ ಸ್ತ್ರೀಯಲ್ಲಿ ನಿಮಗೆ ಭ್ರಾಂತಿಯನ್ನುಂಟುಮಾಡಿದ ಆ ಮನ್ಮಥನೇ ದೊಡ್ಡ ವೈರಿ.

ದುಂಡ—ಛೀ, ಇಲ್ಲಿ ಕೊಡು, ನೀನು ಕೆಲಸಕ್ಕೆ ಬಂದವಳಲ್ಲ, ಹೋಗು ; ಎಲೇ, ಮೇಖಲೆ, ಆ ನಮ್ಮ ಪರಿಚಾರಕನನ್ನು ಈಗಲೇ ಕಳುಹಿಸು, ನಡಿ. (ಹೋಗುವರು) ಎಲೆಲೇ ನಹುಷ, ನನ್ನನ್ನು ನೀನು ಕೊಲ್ಲುವೆಯಾ ; ಆಯಿತಲ್ಲವೆ, ನೀನು ಕೊಂದದ್ದು, ಆ ಸುಂದರಿಗೆ, ನೀನು—ಮೋಹದ ಪತಿಯೋ—ಆಗಲಿ, ಈಗ ನನ್ನ ಖಡಿಗೆಯುವನಿಂದ ನೀನು ಮೃತನಾಗುವೆ ತಿಳಿದಿರು.

(ಆಕಾಶ)—" ನಹುಷನಿಂದ ನೀನೇ ಮೃತನಾಗುವೆ ; ನಿಶ್ಚಯ."

ದುಂಡ—ಏನು ! ಇದಾರು, ಹೀಗೆ ಬಗುಳುವವರು ? ನಾನೆ ಮೃತನಾಗುವೆನೆ ? ವೈರಿಯೋ ನನ್ನ ಕೈಲಿ ಸಾಯುವದಕ್ಕೆ ಸಿದ್ಧನಾಗಿರುವಾಗ, ಇನ್ನು ಈ ಬಗುಳುವವರ ಮಾತು ನಿಜವೇ ? ಇರಲಿ.

ಪರಿಚಾರಕ—ಮಹಾರಾಜನಿಗೆ ಜಯವಾಗಲಿ.

ದುಂಡ—ಅಯ್ಯಾ, ಕಠೋರಹೃದಯ, ಇಲ್ಲಿ ಬಾ, ಹಿಡಿ, **ಈ ಶಿಶುವನ್ನು**—

**ಪರಿಚಾರಕ**—(ಎತ್ತಿಕೊಳ್ಳುವನು)

ದುಂಡ—ಇದು ನಿನಗೆ ಹೇಗೆ ಕಾಣಿಸುವದು ?

ಪರಿಚಾರಕ—(ಸ್ವಗತ) ಮೋಖಲೆಯು ಹೇಳಿದ ಮಾತು ಸುಳ್ಳಲ್ಲ; ಆಗಲಿ (ಪ್ರಕಾಶ) ಇದು ವೈರಿಯಂತೆ ಕಾಣಿಸುವದು ದೇವ—ವೈರಿ—

ದುಂಡ—ಭಲ, ಚನ್ನಾಗಿ ಹೇಳಿದೆ, ಇದನ್ನು ತೆಗೆದುಕೊಂಡು ಹೋಗಿ, ತುಂಡು ತುಂಡಾಗಿ ಕತ್ತರಿಸಿ,

ಪರಿಚಾ—ಹೊಸ ಕತ್ತಿಯನ್ನು ನಿನ್ನೇತಾನೇ ತಂದಿರುವೆನು, ಮಹಾರಾಜ—

ದುಂಡ—ಸರಿ, ಆ ಕತ್ತಿಗೆ ಮೊದಲು ಬಲಿ, ಇವನೇ ಆಗಲಿ; ಕತ್ತರಿಸಿ, ಚೆನ್ನಾಗಿ ಬೇಯಿಸಿ, ಸೊಗಸಾದ ಅಡಿಗೆ ಮಾಡಿ, ಬೆಳಿಗ್ಯೆ ನನ್ನ ಊಟಕ್ಕೆ ಇದನ್ನೇ ತಂದು ಬಡಿಸಬೇಕು; ತಿಳಿಯಿತೇ ?

ಪರಿಚಾ—ನನಗೆ ಹೇಳಿದಮೇಲೆ, ಇದರ ಅತಿ ಇನ್ನೆಲ್ಲಿ, ಪ್ರಭು ?

ದುಂಡ—ಎಚ್ಚರದಿಂದ ಈ ಕಾರ್ಯವನ್ನು ಮಾಡು. (ಹೋಗುವನು)

ಪರಿಚಾ—ಏನು ಮಗು ! ಎಂತಹ ಮಗು !! ಆಹಾ, ಎಷ್ಟು ಚನ್ನಾಗಿರುವದಯ್ಯ ಈ ಕಂದ, ಮಿಣಗುಟ್ಟುತ್ತಿರುವ ಈ ವಿಶಾಲವಾದ ಕಣ್ಣುಗಳೋ ! ಚಂದ್ರ ನನ್ನೂ ಮೀರಿಸಿರುವ ಈ ಮುಖದ ಕಾಂತಿಯೋ ! ಪುಟ್ಟ ಪುಟ್ಟ ಕೈಕಾಲು ಗಳೋ ! ಆಹಾ, ನನ್ನನ್ನೆ ನೋಡಿ ನೋಡಿ ನಗುತ್ತಿರುವದಲ್ಲ ; ಛೀ, ಪಾಪ, ಏತಕ್ಕೆ ನಗುವೆ ; ಇನ್ನೇನು, ಸತ್ತುಹೋಗುವಿಯಲ್ಲ ; ಅಯ್ಯೋ—ಎಷ್ಟು ಆನಂದವಾಗುತ್ತಿರುವದು, ಈ ಮಗುವನ್ನು ಕೈಗಳಿಂದ ಎತ್ತಿಕೊಳ್ಳುವುದಕ್ಕೆ ; ಇದನ್ನು ನೋಡುತ್ತಿದ್ದರೆ, ಸಂತೋಷವು ಉಕ್ಕಿ ಉಕ್ಕಿ ಬರುತ್ತಿರುವದಲ್ಲ !! ಛೀ, ನನಗೆ ಬೇರೆ ಇದನ್ನು ಕೊಲ್ಲಲು ಕೈ ಬರುವದಿಲ್ಲ ; ಏನು ಮಾಡಲಿ ? ಬೆಳಿಗ್ಯೆ ಊಟಕ್ಕೆ, ನಮ್ಮ ದುಂಡರಾಜನಿಗೆ, ಯಾವುದಾದರೊಂದು ಮೃಗದ ಮಾಂಸವನ್ನು ಬೇಯಿಸಿ ಹಾಕಿ, ಈ ಮಗುವನ್ನು, ನಾನು ಸಾಕಿಕೊಳ್ಳಲೆ ? ಕೈಕೆಳಗಿನ ಜನರು ಮಾಡುವ ಮೋಸವನ್ನೂ, ವಂಚನೆಯನ್ನೂ, ಕಂಡು ಹಿಡಿಯುವಷ್ಟು ಸಾಮರ್ಥ್ಯವು ಈ ಸುಖಾಭಿಲಾಷಿಯಾದ, ಮದೋನ್ಮತ್ತ ನಾದ ರಾಜನಿಗೆ ಉಂಟೇ ? ಅಷ್ಟು ವಿವೇಕವಾದರೂ ಈ ರಾಜನಿಗಿದ್ದಿದ್ದರೆ, ಹೀಗೆ ಅನ್ಯಾಯವು ಏತಕ್ಕೆ ಮಿತಿಮೀರುತ್ತಿತ್ತು !! ಈ ದುಂಡನ ಪ್ರಜೆಗಳು ಏತಕ್ಕೆ ಪರಿತಪಿಸುತ್ತಿದ್ದರು ? ಕಷ್ಟ—ಕಷ್ಟ—ಇರಲಿ, ಅರಣ್ಯಕ್ಕೆ ಈಗಲೇ ನುಗ್ಗಿ, ಮಗುವನ್ನು ಯಾವದಾದರೊಂದು ಆಶ್ರಮದ ಬಳಿ ಬಿಟ್ಟು, ಮೃಗವನ್ನು ತಂದು, ದುಂಡನಿಗೆ ಬೇಯಿಸಿ ಹಾಕಿಬಿಡುವೆನು ; ಮಗುವು ಸತ್ತೇ ಹೋಯಿತೆಂದು ಹೇಳಿಬಿಡುವೆನು. ಪಾಪ, ಈ ಕಂದನು ಎಲ್ಲಾದರೂ ಬದುಕಿಕೊಳ್ಳಲಿ. (ಹೋಗುವನು)

**ಪ್ರವೇಶ 3** [ನಂದನವನದಲ್ಲಿ]

ನಾರದ—ಎಲಾ ಎಲಾ ದುಂಡ !! ಎಷ್ಟು ದುರಹಂಕಾರವಯ್ಯ ನಿನಗೆ ; ವೈರಿ—ವೈರಿ—ಎಂದು ವೈರಿಗಾಗಿ ಏತಕ್ಕೆ ಆಶಿಸುತ್ತಿರುವೆ ; ನಿನ್ನ ವೈರಿಯನ್ನು ಶಿಶುವಾಗಿ ಮಾಡಿ, ಸಂಹರಿಸುವದಕ್ಕೆ ಅನುಕೂಲಿಸುವಂತೆ, ನಿನ್ನ ಸ್ವಾಧೀನಕ್ಕೇ ಕೊಟ್ಟಿದ್ದನಲ್ಲವೆ ; ವೈರಿಯನ್ನು ಸಂಹರಿಸದೆ, ಏತಕ್ಕೆ ಬಿಟ್ಟುಬಿಟ್ಟೆ ? ಬುದ್ಧಿಯು ಮಲಿನವಾಯಿತೇನೋ ಪಾಪ !! ಅಹುದು, ವಿನಾಶಕಾಲವು ಸಮಾಪಿಸಿರುವಾಗ, ನಿನಗೆ ದುರ್ಬುದ್ಧಿಯು ತಾನೇ ಸಂಜನಿಸಬೇಕಾದುದು. ಆ ಶಿಶುವನ್ನು ಯಾರೇ ನೋಡಲಿ, ಯಾರೇ ಎತ್ತಿಕೊಳ್ಳಲಿ, ಅವರ ಬುದ್ಧಿಯೆಲ್ಲವೂ ಆ ಶಿಶುವಿನ ಅಧೀನ ; ಅದು ಅಂತಹ ವಿಚಿತ್ರವಾದ ಶಿಶುವು ; ಪರಿಚಾರಕನು ಸಂಹರಿಸಲು ಒಪ್ಪಿದನೇನು ? ಆತನ ಕೈಲಿ ಜಗನ್ನಾಯಕನು ಬಾಲರೂಪದಿಂದಿರುವಾಗ, ಅವನ ಬುದ್ಧಿಯು ಅವನ ಸ್ವಾಧೀನದಲ್ಲಿ ಎಲ್ಲಿತ್ತು ? ಮಗುವಿನ ಪ್ರೇರಣೆಯಂತೆಯೇ, ಆತನೂ ವರ್ತಿಸಬೇಕಾಯಿತು. ಅವನು ಶಿಶುವನ್ನು ನಮ್ಮ ಅಗ್ರಜನಾದ ವಸಿಷ್ಠನ ಆಶ್ರಮದ್ವಾರದಲ್ಲಿಟ್ಟು, ಯಾವುದೋ ಮೃಗವನ್ನು ದುಂಡನಿಗೆ ತಿನ್ನಿಸಿ, ಮಗು ಸತ್ತಿತೆಂದು ಹೇಳಿದನು ; ದುಂಡನೂ ನಂಬಿಕೊಂಡಿರುವನು ; ಶಿಶುವು ನಮ್ಮ ಅಣ್ಣನ ಬಳಿಯಲ್ಲಿ ವೃದ್ಧಿಯಾಗುತ್ತಲೇ ಇರುವದು ; ಇದೇನು ಆರ್ಭಟ !! (ನೋಡಿ) ಓಹೋ, ದುಂಡನು ಈ ಕಡೆಗೇ ಬರುತ್ತಿರುವನಲ್ಲ ; ನಹುಷನು ಸತ್ತನೆಂದು ಹೇಳಿ, ಆ ಅಶೋಕಸುಂದರಿಯನ್ನು ಪುನಃ ಬಲಾತ್ಕರಿಸುವದಕ್ಕೋ ; ಇರಲಿ. ನಾನು ಮರೆಯಾಗುವೆನು. (ಹೋಗುವನು)

ದುಂಡ—ವೈರಿಯು ನಿಶ್ಶೇಷನಾದನು. ಇನ್ನು ಆ ಸುಂದರಿಯು ನನ್ನನ್ನಲ್ಲದೆ, ಮತ್ತಾರನ್ನು ತಾನೇ ವರಿಸುವಳು ! ಎಲ್ಲಿರುವಳೋ ಆಕೆಯು ಕಾಣೆನಲ್ಲ ? (ನೋಡಿ) ಆಹಾ ! ಈ ಕಡೆಗೇ ಬರುತ್ತಿರುವಳು ! ಬರಲಿ—

ಅಶೋ—ಆಹಾ, ಈ ಪರದಾರಾಸಕ್ತನಾದ ಪಾಪಿಯು, ಮತ್ತೇತಕ್ಕೆ ಇಲ್ಲಿಗೆ ಬಂದನು ?

ದುಂಡ—ಸುಂದರೀ, ನಾನು ಪರದಾರಾಸಕ್ತನೂ ಅಲ್ಲ, ನೀನು ಪರಸ್ತ್ರೀಯೂ ಅಲ್ಲ.

ಅಶೋ—ನಾನು ಪರಸ್ತ್ರೀಯಲ್ಲವೆಂದು ಹೇಗೆ ಹೇಳುವೆ ; ನಾನು ನಹುಷನ ಪತ್ನಿಯು ; ಅನ್ಯ ಸ್ತ್ರೀಯು ; ನಿನ್ನವಳಲ್ಲ ; ಹೋಗು.

ದುಂಡ—ಮೃತನಾದ ನಹುಷನಿಗೆ ನೀನು ಪತ್ನಿಯಾಗುವದು ಹೇಗೆ ?

ಅಶೋ—ಏನು ? ನಹುಷನು ಮೃತನಾದನೇ !!

ದುಂಡ—ಸತ್ತೇಹೋದನು ; ನೆಗೆದುಬಿದ್ದನು. ಅವನ ಅವತಾರವೇ ಪೂರ್ತಿಯಾಯಿತು.

ಅಶೋ—ಛಿ, ಏತಕ್ಕೆ ಇಂತಹ ಅನಾಚ್ಯಗಳನ್ನಾಡುವೆ ? ನಹುಷನನ್ನು ಸಂಹರಿಸು ವಂತಹ ಧೀರನೂ ಉಂಟೆ ?

ದುಂಡ—ಏನು, ಹಾಗೆಂದರೆ ; ಇಗೋ, ಇಲ್ಲಿನೋಡು, ಈ ಧೀರನೇ ನಿನ್ನ ನಹುಷ ನನ್ನು ಸಂಹರಿಸಿದವನು.

ಅಶೋ—ನಿಶ್ಚಯವೇ ? ನಹುಷನು ಮೃತನಾದನೇ ?

ದುಂಡ—ಸತ್ಯವಾಗಿಯೂ ಸತ್ತನು. ನಾನೇ ಅವನನ್ನು ತುಂಡು ತುಂಡಾಗಿ ಕತ್ತ ರಿಸಿ, ಪಾಕಮಾಡಿಸಿ, ತಿಂದು, ತೇಗಿ, ತೃಪ್ತನಾಗಿ, ನಿನ್ನನ್ನು ವರಿಸಲು ಬಂದಿ ರುವೆನು.

ಅಶೋ—ಅದು ಹೇಗೆ ನಹುಷನು ನಿನ್ನ ವಶನಾದನು ?

ದುಂಡ—ಆಯುವಿನ ಹೆಂಡತಿಯು ಪ್ರಸವಿಸುವಾಗ, ನಾನಲ್ಲಿ ಮಾಯಾರೂಪದಿಂ ದಿದ್ದು, ಮಗುವನ್ನು ಎತ್ತಿಕೊಂಡು ಹೋಗಿ ಸಂಹರಿಸಿ ತಿಂದುಬಿಟ್ಟೆನು. ನನ್ನ ವೈರಿಯೂ ನಾಶವಾದನು. ನಿನ್ನ ಪತಿಯೂ ಪರಲೋಕವನ್ನು ಸೇರಿದನು.

ಅಶೋ—ಅಯ್ಯೋ, ಮುಂದೆ ನನಗೆ ಗತಿಯೇನು ?

ದುಂಡ—ಆಯಿತಲ್ಲವೆ ನಿನ್ನ ಶಾಪ ! ನಹುಷನು ನನ್ನನ್ನು ಕೊಂದದ್ದೂ ಆಯಿತು ! ನೀನು ನಹುಷನನ್ನು ವರಿಸಿ, ಅವನೊಡನೆ ಆನಂದಿಸಿದ್ದೂ ಆಯಿತು ! ಹೋಗಲಿ, ಬಿಡು, ಏತಕ್ಕೆ ದುಃಖಿಸುವೆ ? ನಿನಗೆ ಮುಂದೆ ನಾನೇ ಗತಿ ! ಬಾ, ಇನ್ನಾದರೂ ನನ್ನನ್ನು ಪ್ರೀತಿಯಿಂದ ಆಲಿಂಗಿಸು.

ಅಶೋ—ನಮ್ಮ ಮಾತೆಯಾದ ಪಾರ್ವತಿಯ ವಾಕ್ಯವೂ ಅನೃತವಾಗುವದುಂಟೆ ? ನಹುಷನು ಮೃತನಾದಮೇಲೆ, ನಾನಿನ್ನು ಯಾರಿಗಾಗಿ ಜೀವಿಸಬೇಕು ?

ದುಂಡ—ಅವನು ಸತ್ತದ್ದರಿಂದ, ಕಷ್ಟವೇ ಬಿಡುಗಡೆ ಆಯಿತು !—ಇನ್ನು—ನೀನು ನನಗಾಗಿ ಜೀವಿಸು ಬಾ. ಸತ್ತವನ ಹಂಬಲು ಇನ್ನೇತಕ್ಕೆ ?

ಅಶೋ—ಆಹಾ ನೀಚನಾದ ಇವನಿಂದ ನಹುಷನಿಗೆ ಮರಣವುಂಟಾದದ್ದು ನಿಶ್ಚ ಯವೇ ? ಹೇ ಜಗನ್ನಾಥ ! ನನಗೆ ಏನೂ ತೋರುವದಿಲ್ಲವಲ್ಲ !

(ಅಂತರಿಕ್ಷ)—'' ಸಾಧ್ವೀಮಣೀ, ಅಶೋಕಸುಂದರೀ, ಅಂಜದಿರು. ನಹುಷನು ಜನಿಸಿ ಆಗಲೇ ಬಹುಕಾಲವಾಗಿ, ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧ ಮಾನನಾಗುತ್ತಿರುವನು. ಸದ್ಯದಲ್ಲೇ ಶತ್ರುಸಂಹಾರಮಾಡಿ, ನಿನ್ನನ್ನು ಸತ್ಯವಾಗಿಯೂ ವರಿಸುವನು. ಲೋಕಮಾತೆಯಾದ ಪಾರ್ವತಿಯ ವಾಕ್ಯವು ಎಂದಿಗೂ ಸುಳ್ಳಾಗಲಾರದು. ನಂಬು.''

ದುಂಡ—ಏನು ! ಏನಿದು ! ಈ ರೀತಿ ಅಬದ್ಧವನ್ನುಸುರುವವರಾರು ? ಕತ್ತರಿಸಿ,

ತುಂಡು ತುಂಡಾಗಿ ಮಾಡಿ, ಬೇಯಿಸಿ, ನಾನು ತಿಂದುಬಿಟ್ಟಿರುವ ನಹುಷನು, ಬೆಳೆಯುತ್ತಿರುವದು ಹೇಗೆ ? ಆಶ್ಚರ್ಯ, ಆಶ್ಚರ್ಯ !!

ಅಶೋ—ನನ್ನ ನಾಥನಾದ ನಹುಷನು ಜೀವಿಸಿರುವನೆಂದು ನುಡಿದ, ಈ ಆಕಾಶ ವಾಣಿಗೆ ಮಂಗಳವಾಗಲಿ ; ಛೀ—ಈ ನೀಚನ ಮುಂದೆ ಇರಬಾರದು. (ಹೋಗುವಳು)

ದುಂಡ—ಈ ರಮಣೀರತ್ನವನ್ನು ವರಿಸುವದಕ್ಕೆಂದು ನಾನು ಬಂದರೆ, ಮೃತನಾದ ನನ್ನ ಶತ್ರುವು ಜೀವಿಸುತ್ತಿರುವನೆಂದು, ಈ ವಾಣಿಯು ಕೇಳಿಸಿತಲ್ಲಾ ; ಹಿಂದೆ ನನ್ನ ಅಂತಃಪುರದಲ್ಲೂ, ಹೀಗೆಯೇ ಬಡಿದುಕೊಂಡಿತು !! ನೀನೇ ಸಾಯುವೆ ಎಂದು ; ಏನಾದರೂ ಪ್ರಮಾದವು ಸಂಭವಿಸಿರಬಹುದೇ ! ಆ ಪರಿಚಾರಕನು ಶಿಶುವನ್ನು ಕೊಲ್ಲದೆ ಬಿಟ್ಟುಬಿಟ್ಟಿರಬಹುದೆ ? ಹಾಗೆ ಅವನು ಮಾಡಿದ್ದರೆ, ಅವನನ್ನು ತುಂಡು ತುಂಡಾಗಿ ಕತ್ತರಿಸಿಯೇ ಬಿಡು ವೆನು. ಏನಾದಂತಾಯಿತು ; ವೈರಿಯು ನಿಂತೇಹೋದನು, ಈಗಲೇ ಹೋಗಿ, ಆ ಅಡಿಗೆಯುವನನ್ನು ವಿಚಾರಿಸಿ, ನಿಜಾಂಶವನ್ನು ತಿಳಿದು, ಮುಂ ದಿನ ಕಾರ್ಯವನ್ನು ಮಾಡುವೆನು. ಎಲೇ ಸುಂದರೀ, ನೀನು ಬೇರೆ ನನ್ನನ್ನು ವರಿಸದಿರುವದಕ್ಕೆ ಸಾಧ್ಯವೇ ಇಲ್ಲವೆಂದು ನಂಬು ; ಒಂದು ವೇಳೆ, ನಹುಷನು ಜೀವಿಸಿದ್ದರೂ, ಈಗ ಹೋಗಿ, ಅವನನ್ನು ಪೂರ್ತಿಮಾಡದೇ ಬಿಡುವದೇ ಇಲ್ಲ. ನೋಡು, ಈ ದುಂಡನ ಸಾಹಸವನ್ನಾದರೂ. (ಹೋಗುವನು)

## ಪ್ರವೇಶ 4

[ಯುದ್ಧರಂಗದಲ್ಲಿ]

ನಾರದ—ಹೀಗೆಯೇ ಬನ್ನಿ, ಇಲ್ಲೇ—ಇಲ್ಲೇ—ಘೋರ ಯುದ್ಧವಾಗಬೇಕಾದ ಸ್ಥಳವು ಇದೇ—

ಪಾರ್ವತಿ—ನಮ್ಮ ಕುಮಾರಿಯು ಎಲ್ಲಿರುವಳು ನಾರದ ?

ನಾರದ—ಈ ನಂದನವನದ ಆ ಭಾಗದಲ್ಲಿರುವಳು, ದೇವಿ.

ಈಶ್ವರ—ಆ ನೀಚನಾದ ದುಂಡನು ನಮ್ಮ ಪುತ್ರಿಯನ್ನು ಸಂಗ್ರಹಿಸುವದಕ್ಕೆ ಬಂದನೇ. ಅವನಿಗೆಷ್ಟು ಧೈರ್ಯ !

ನಾರದ—ಕೇವಲ ಸಂಗ್ರಹವೇ ಅಲ್ಲ. "ನಮ್ಮ ಮಾತೆಯ ಆಜ್ಞೆಯಂತೆ, ನಾನು ನಹುಷನನ್ನು ಪತಿಯಾಗಿ ವರಿಸಿರುವೆನು, ನನ್ನನ್ನು ಪೀಡಿಸಬೇಡ" ಎಂದು ಆ ಬಾಲೆಯು ಎಷ್ಟು ಪ್ರಾರ್ಥಿಸಿಕೊಂಡರೂ, ಬಿಡದೆ ಹಿಡಿದು ಎಳೆದಾಡಿ ಬಿಟ್ಟನು ದೇವಾ ! ನಿನ್ನ ಭಯವೂ ಅವನಿಗಿಲ್ಲವಲ್ಲ !!

ಪಾರ್ವತಿ—ಏನೇ ಆಗಲಿ, ಆ ನೀಚನನ್ನು ಸಂಹರಿಸಿಯೇಬಿಡಬೇಕು, ನಾರದ.

ವಿಷ್ಣು—ದೇವಿ, ಹೀಗೆ ಬಾ, ಇಲ್ಲಿ ನೋಡು, ಪಾರ್ವತೀ ಪರಮೇಶ್ವರರೂ ಆಗಲೇ ಇಲ್ಲಿಗೆ ಬಂದಿರುವರು.

ಲಕ್ಷ್ಮಿ—ಓಹೋಹೋ, ಏನು ಗೌರಿ, ಇಷ್ಟುದೂರ.

ಗೌರಿ—ನೋಡಿದೆಯಾ ಲಕ್ಷ್ಮೀ, ಆ ನೀಚನಾದ ದುಂಡನು ನಮ್ಮ ಕುಮಾರಿಯನ್ನು ಮೋಹಿಸಿದನಂತಲ್ಲ ! ಅವನ ಮದವೆಷ್ಟಿರಬಹುದು ?

ಲಕ್ಷ್ಮಿ—ಇದೇನು ನಾರದ ! ನೀನು ನನಗೆ ಹೇಳಿದ್ದೇನು ! ಈ ಗೌರಿಯು ಹೇಳುತ್ತಿರುವದೇನು ?

ನಾರದ—ಏನು ಹೇಳುತ್ತಿರುವಳು, ಗೌರಿಯು ?

ಲಕ್ಷ್ಮಿ—" ನಿನ್ನ ಕುಮಾರನನ್ನು ದುಂಡ ದೈತ್ಯನು ಸಂಹರಿಸುವದಕ್ಕೆ ಬಂದಿರುವನು. ಬಂದು ನೀವು ಕಾಪಾಡಬೇಕು " ಎಂದು ನಮ್ಮನ್ನು ಕರೆದು ತಂದೆ ; ಈಕೆಯು ಹೇಳುವದನ್ನು ಕೇಳಿದರೆ, ನಮ್ಮ ಕುಮಾರಿಯನ್ನು ದುಂಡನು ಹಿಂಸಿಸಿದನಲ್ಲಾ ಎಂದು ಹೇಳುತ್ತಿರುವಳು ; ನಮ್ಮ ಕುಮಾರನಾದ ನಹುಷನನ್ನಲ್ಲವೆ ದುಂಡನು ಪೀಡಿಸುತ್ತಿರುವದು ?

ನಾರದ—ಅಹುದು, ಲಕ್ಷ್ಮೀದೇವಿ—ನಿನ್ನ ಕುಮಾರನನ್ನು—ನಹುಷನನ್ನು.

ಗೌರಿ—ಏನು ನಾರದ, ನಮ್ಮ ಕುಮಾರಿಯಾದ ಅಶೋಕಸುಂದರಿಯನ್ನಲ್ಲವೆ ಆ ಅಧಮನು ತೊಂದರೆಪಡಿಸುತ್ತಿರುವದು ?

ನಾರದ—ಅಹುದು, ಗೌರೀದೇವಿ—ನಿನ್ನ ಕುಮಾರಿಯನ್ನು, ಅಶೋಕಸುಂದರಿಯನ್ನು.

ಲಕ್ಷ್ಮಿ—ಆದರೆ ನಮಗೆ ಇಲ್ಲೇನು ಕಾರ್ಯ ; ಬನ್ನಿ ನಾಥ, ನಾವು ಹೋಗುವ ; ಗೌರಿಯ ಕುಮಾರಿಯನ್ನು ಗೌರಿಯೇ ರಕ್ಷಿಸಿಕೊಳ್ಳಲಿ.

ಗೌರಿ—ಈ ಲಕ್ಷ್ಮಿಯ ಕುಮಾರನನ್ನು ಈ ಲಕ್ಷ್ಮಿಯೇ ಸಂರಕ್ಷಿಸಿಕೊಳ್ಳುವಳು ; ದೇವ ನಡಿ, ನಾವು ಹೋಗುವ.

ವಿಷ್ಣು—ಈವರೆಗೂ ಎಷ್ಟೋ ಕೋಟಿ ದೈತ್ಯರನ್ನು ಸಂಹರಿಸಿದೆನು, ಶಂಕರ, ಆದರೂ ಈ ದುಂಡನು ಅವರನ್ನೆಲ್ಲರನ್ನೂ ಮೀರಿಸಿರುವನು ! ನನ್ನ ಕುಮಾರನಾದ ನಹುಷನನ್ನು ಕತ್ತರಿಸುವದಕ್ಕೆ ಕಾದಿರುವನಂತಲ್ಲ ! ಕೇಳಿದೆಯಾ ಶಂಕರ ?

ಈಶ್ವರ—ನಮ್ಮ ಪುತ್ರಿಯಾದ ಅಶೋಕಸುಂದರಿಯನ್ನು ಬಲಾತ್ಕರಿಸಿದನಂತಲ್ಲ ! ಕೇಳಿದೆಯಾ ನಾರಾಯಣ ?

ವಿಷ್ಣು—ಏನು ನಾರದ, ಯಾರನ್ನು ಆ ದುಂಡನು ಪೀಡಿಸುತ್ತಿರುವದು ?

ನಾರದ—ದೇವಾ, ನಮ್ಮ ನಹುಷನನ್ನು.

ಈಶ್ವರ—ನಾರದ, ಯಾರನ್ನು ಆ ನೀಚನು ಮಾನಹಾನಿ ಮಾಡುವದಕ್ಕೆ ಹೊರಟಿರುವದು ?

ನಾರದ—ತಮ್ಮ ಕುಮಾರಿಯನ್ನು, ಅಶೋಕಸುಂದರಿಯನ್ನು.

ವಿಷ್ಣು—ಆದರೆ ಆ ಕುಮಾರಿಯನ್ನು ಈ ಜನಕನೇ ಸಂರಕ್ಷಿಸಿಕೊಳ್ಳಲಿ.

ಲಕ್ಷ್ಮಿ—ಅಹುದು, ನಮಗೆ ಇಲ್ಲೇನು ಅಗ್ಗ ; ನಡೆಯಿರಿ.

ಈಶ್ವರ—ತನ್ನ ಕುಮಾರನನ್ನು ಈ ವಿಷ್ಣುವೇ ರಕ್ಷಿಸಿಕೊಳ್ಳುವನು ; ನಾವೇತಕ್ಕೆ ಇಲ್ಲಿರಬೇಕು ?

ಗೌರಿ—ನಾನು ಮೊದಲೇ ವಿಜ್ಞಾಪಿಸಲಿಲ್ಲವೆ : ಬನ್ನಿ, ನಹುಷನನ್ನು ಅವನ ಜನಕನೇ ಕಾಪಾಡುವನು.

ನಾರದ—ಶಾಂತರಾಗಿ, ಶಾಂತರಾಗಿ ; ಈ ಸ್ತ್ರೀಯರ ಮಾತಿಗೆ ಕಿವಿಜೋಲುಬಿಟ್ಟು, ಏತಕ್ಕೆ ಹೀಗೆ ಆತುರಪಡುತ್ತಿರುವಿರಿ ? ನಾರಾಯಣ, ಶಂಕರ.

ಲಕ್ಷ್ಮಿ—ಏನು ? ನಾವು ಸ್ತ್ರೀಯರೇ ? ಸ್ತ್ರೀಯರಾದ ಮಾತ್ರಕ್ಕೆ ಅಷ್ಟು ಅಸಡ್ಡೆಯೇ ? ಪಿತ್ತವು ಉದ್ರೇಕವಾಗಿದೆಯೇನು, ನಾರದ, ನಿನಗೆ ?

ಪಾರ್ವತಿ—ನಾವು ಸ್ತ್ರೀಯರೇ ? ಹೂಂ, ಹೂಂ ! ಆಗಲಿ, ನಾವು ಸ್ತ್ರೀಯರೇ ! ನೀನು ಮಾತ್ರ ಪುರುಷನೋ ? ನಿನಗೆ ಜ್ಞಾನವೆಲ್ಲಿದೆಯೋ ನಾರದ ? ನಾವಲ್ಲ ಸ್ತ್ರೀಯರು ; ಸ್ತ್ರೀಯು ನಿನ್ನನ್ನು ಪಡೆದವರು, ನಿಮ್ಮ ತಂದೆ, ನಿಮ್ಮ ತಾತ—

ಶಾರದೆ—(ಬ್ರಹ್ಮನೊಡನೆ) ಇವರ ಗರ್ವವನ್ನು ನೋಡಿದಿರಾ ? ಎಲ್ಲರೂ ಒಂದಾಗಿ ನಮ್ಮ ಕುಮಾರನನ್ನು, ಏನೂ ಅರಿಯದ ಸಾಧುವಾದ ಈ ನಾರದನನ್ನು, ಹೀಗೆ ತಿರಸ್ಕರಿಸಿ ಮಾತನಾಡುತ್ತಿರುವರಲ್ಲ ! ನಾರದನೆಂದರೆ ಇವರಿಗೆಲ್ಲ ಅಷ್ಟು ಅಲಕ್ಷ್ಯವಾಯಿತಲ್ಲವೆ ! ನನ್ನ ಪುತ್ರನೆಂದು ತಿಳಿದೂ ತಿಳಿದೂ, ಈ ನಾರದನನ್ನು ಇವರು ಹೀಗೆ ಜರಿಯುತ್ತಿರುವರಲ್ಲ !

ಲಕ್ಷ್ಮಿ—ಬ್ರಹ್ಮನು ಪಡೆದ ಪುತ್ರನನ್ನು ತನ್ನ ಪುತ್ರನೆಂದು ಹೇಳುತ್ತಾ ಎಷ್ಟು ಜಂಭಪಡುತ್ತಿರುವಳು ಇವಳು !!

ಶಾರದೆ—ಆಯು ಮಹಾರಾಜನ ಪತ್ನಿಯು ಪ್ರಸವಿಸಿದ ನಹುಷನನ್ನು, ತನ್ನ ಪುತ್ರನೆಂದು ತಿಳಿದು ಇವಳು ಪಡುತ್ತಿರುವ ದುರಹಂಕಾರವನ್ನು, ನೋಡಿದರೆ ನಗೆಯು ಬರುತ್ತಿರುವದು.

ಗೌರಿ—ಅಷ್ಟೇ ಅಲ್ಲ ; ನಾರಾಯಣನು ಹೆತ್ತ ಬ್ರಹ್ಮನನ್ನು ತನ್ನ ಪುತ್ರನೆಂದು ತಿಳಿದು, ಮೆರೆಯುವ ಈ ಲಕ್ಷ್ಮಿಯ ಅಜ್ಞಾನವು, ಮತ್ತಷ್ಟು ನನಗೆ ನಗುವನ್ನು ಹೆಚ್ಚಿಸುತ್ತಿರುವುದು !!

ಶಾರದೆ—ಕಲ್ಪವೃಕ್ಷವು ಹೆತ್ತ ಅಶೋಕಸುಂದರಿಯನ್ನು, ತಾನು ಪಡೆದ ಪುತ್ರಿಯೆಂದು ತಿಳಿದಿರುವ, ನಿನ್ನ ಅವಿವೇಕವು, ಮೀರಿದ ಆಶ್ಚರ್ಯವನ್ನೇ ಉಂಟುಮಾಡುತ್ತಿರುವದು.

ಗೌರಿ—ಏನೇ ಶಾರದಾ, ನೀನು ಸಕಲಕಲಾಭಿಜ್ಞಳಾಗಿದ್ದೂ, ಅತ್ತೆಯನ್ನು ವಹಿಸಿಕೊಂಡೇ ಮಾತನಾಡುತ್ತಿರುವೆ ?

ಶಾರದೆ—ಅತ್ತೆಯನ್ನು ವಹಿಸಿಕೊಂಡು, ಅತ್ತೆ ಮಾವಂದಿರಿಗೆ ಶಿರಬಾಗಿ ವರ್ತಿಸುವ, ಕೈಲಾಗದ ಸೊಸೆಯಲ್ಲ, ಈ ಶಾರದೆ ; ನನ್ನ ಹೆಸರು ಹೇಳಿದವರಿಗೂ, ಕೈಯಲ್ಲಿ ನೆಪಮಾತ್ರಕ್ಕೆ ಪುಸ್ತಕವನ್ನು ಧರಿಸಿದ ಸ್ತ್ರೀಯಳಿಗೂ, ಅತ್ತೆ ಮಾವಂದಿರಿಗೆ ತಗ್ಗಿ ನಡೆಯುವ ದುರ್ಬುದ್ಧಿ ಎಂದಿಗೂ ಬರಲಾರದು.

ಬ್ರಹ್ಮ—ಶಾರದಾ, ಇವರೊಡನೆ ಕಲಹವೇತಕ್ಕೆ, ನಮಗೆ ? ನಾವು ಬಂದಿರುವದು ನಮ್ಮ ಮೊಮ್ಮಗನಿಗಾಗಿ.

ಗೌರಿ—ನಮಗೆತಾನೇ ಏತಕ್ಕೆ ವಾಗ್ವಾದ ; ನಾವು ಬಂದಿರುವದು ನಮ್ಮ ಪುತ್ರಿಗಾಗಿ.

ಲಕ್ಷ್ಮಿ—ನಮಗೆತಾನೇ ಏತಕ್ಕೆ ಕಲಹ ; ನಾವು ಬಂದಿರುವದು ನಮ್ಮ ಪುತ್ರನಿಗಾಗಿ.

ಶಾರದೆ—ನಾರದ, ನಮ್ಮ ಮೊಮ್ಮಗನಾದ ನಹುಷನೆಲ್ಲೀ ?

ನಾರದ—ಇನ್ನೇನು ಈಗ ಬರುವನು, ಜನನೀ.

ಲಕ್ಷ್ಮಿ—ಎಲ್ಲೀ, ನಾರದ, ನಮ್ಮ ಕುಮಾರನಾದ ನಹುಷನು ?

ನಾರದ—ಇನ್ನೇನು, ಇಷ್ಟರಲ್ಲೇ ಬಂದೇ ಬರುವನು, ದೇವೀ.

ಗೌರಿ—ನಮ್ಮ ಕುಮಾರಿಯು ಎಲ್ಲಿರುವಳು, ನಾರದ ?

ನಾರದ—ಈಗ ಬರುವವರು ನಿಮ್ಮ ಕುಮಾರಿಯಲ್ಲ ದೇವೀ ; ನಿಮ್ಮ ಅಳಿಯನು ಬರುವನು ; ನಿಮ್ಮ ಜಾಮಾತನು.

ಲಕ್ಷ್ಮಿ—ಏನು ! ನನ್ನ ಕುಮಾರನು ಈ ಗೌರಿಯ ಜಾಮಾತನೇ !!

ನಾರದ—ನಿನ್ನ ಕುಮಾರನಾದರೂ ಸರಿ ; ನಿನ್ನ ಪತಿಯಾದರೂ ಸರಿ.

ಶಾರದೆ—ನನ್ನ ಮೊಮ್ಮಗನು ಈ ಪಾರ್ವತಿಗೆ ಅಳಿಯನೇ ?

ನಾರದ—ನಿನ್ನ ಮೊಮ್ಮಗನಾದರೂ ಸರಿ ; ನಿನ್ನ ಮಾವನಾದರೂ ಸರಿ.

ಗೌರಿ—ಏನು ! ನಹುಷನು ನನ್ನ ಜಾಮಾತನೇ !!

ನಾರದ—ನಹುಷನೆಂದರೂ ಸರಿಯೇ ; ನಿಮ್ಮ ಅಗ್ರಜ ವಿಷ್ಣುವೆಂದರೂ ಸರಿಯೆ.

ಈಶ್ವರ—ಏನು, ಈ ಗೌರಿಯ ಅಗ್ರಜನೇ ನಹುಷನೇ ?

ನಾರದ—ಅಹುದು, ನಿನ್ನ ಭಾವಮೈದನೇ ನಹುಷ.

ಬ್ರಹ್ಮ—ಏನು ? ಈಶ್ವರನ ಭಾವಮೈದನಾದ ವಿಷ್ಣುವೇ ನಹುಷನೇ ? ಅವನೇ ಇವನಿಗೆ ಅಳಿಯನೇ !

ನಾರದ—ಅಹುದು, ನಿಮ್ಮ ಜನಕ ವಿಷ್ಣುವೇ, ನಮ್ಮ ತಾತ ನಾರಾಯಣನೇ, ನಹುಷ.

ವಿಷ್ಣು—ಏನು ನಾರದ ? ನಾನೇ ನಹುಷನೇ !!

ನಾರದ—ಅಲ್ಲ, ಈ ಲಕ್ಷ್ಮಿಯು ಕಾಂತನೇ ನಹುಷ.

ಲಕ್ಷ್ಮಿ—ಛೀ, ಏನೆಂದು ಮಾತನಾಡುವೆ ; ನಾರದ—ಎಚ್ಚರ.

ನಾರದ—ಇಲ್ಲ, ಇಲ್ಲ, ನಿನ್ನ ಕುಮಾರನೇ ನಹುಷ, ಲಕ್ಷ್ಮೀದೇವೀ—

ವಿಷ್ಣು—ಆದರೆ ನಮ್ಮ ಕುಮಾರನನ್ನು ರಕ್ಷಿಸುವದಕ್ಕೆ ನಾನು ನಿಲ್ಲಲೇಬೇಕು.

ಲಕ್ಷ್ಮಿ—ನಿಲ್ಲುವದು ಮಾತ್ರವೇ ಅಲ್ಲ ; ನಿಮ್ಮ ಚಕ್ರವನ್ನೇ ಅವನಿಗೆ ಕೊಡಬೇಕು.

ಶಾರದೆ—ನಮ್ಮ ಮುಮ್ಮಗನನ್ನು ಕಾಪಾಡುವದಕ್ಕಾಗಿ ನೀವೂ—

ಬ್ರಹ್ಮ—ನಾನೇ ? ನನ್ನ ಬ್ರಹ್ಮಾಸ್ತ್ರವನ್ನೇ ಕೊಡುವೆನು.

ಈಶ್ವರ—ನನ್ನ ಅಳಿಯನನ್ನು ಕಾಪಾಡುವದಕ್ಕಾಗಿ ನಾನು—

ಗೌರಿ—ಇನ್ನೇನು ; ತ್ರಿಶೂಲವನ್ನೇ ಕೊಟ್ಟುಬಿಡಿ. ಮಗಳಿಗಿಂತಲೂ ಹೆಚ್ಚೇ ?

(ವಸಿಷ್ಠರೊಡನೆ ನಹುಷನು ಬರುವನು)

ವಸಿಷ್ಠ—ಹೋ ! ಹೋ !! ಕುಮಾರ, ನಹುಷ, ಇಗೋ ನಿನ್ನನ್ನು ಅನುಗ್ರಹಿಸು ವದಕ್ಕಾಗಿ ತ್ರಿಮೂರ್ತಿಗಳೂ ಅವರ ಪತ್ನಿಯರೂ ಸಿದ್ಧವಾಗಿ ಬಂದು ನಿಂತಿರುವರು ; ವೈರಿ ವಿಜಯಕ್ಕೆ ಇದೇ ಶುಭಸೂಚನೆಯಲ್ಲವೆ ! ಇವರಿಗೆಲ್ಲ ಅಭಿವಂದಿಸು.

ಸರಸ್ವತಿ—ನನ್ನ ಮುಮ್ಮಗನಾದ ನಹುಷನೇ, ನೀನು ದುಂಡನನ್ನು ಸಂಹರಿಸಿ ವಿಜಯವನ್ನು ಪಡೆ.

ಬ್ರಹ್ಮ—ಇಗೋ ಈ ಬ್ರಹ್ಮಾಸ್ತ್ರವನ್ನೇ ಸ್ವೀಕರಿಸು, ವಿಜಯಿಯಾಗು—

ನಹುಷ—ತಥಾಸ್ತು.

ಲಕ್ಷ್ಮಿ—ಕುಮಾರ ನಹುಷ, ಶತ್ರುವನ್ನು ಧ್ವಂಸಮಾಡು, ನಿನಗೆ ಮಂಗಳವಾಗಲಿ ;

ಶಾರದೆ—ಪತಿಗೆ ಪತ್ನಿಯು ಆಶೀರ್ವದಿಸುತ್ತಿರುವಳು, ಆಶೀರ್ವಾದ !!

ನಾರದ—ಈಕಾಲದ ಮಹಿಮೆಯೇ ಹಾಗೆ ; ಶಾರದಾದೇವೀ !!

ಲಕ್ಷ್ಮಿ—ಅಲ್ಲವೇ, ಮಾವನಿಗೆ ಸೊಸೆ ಆಶೀರ್ವಾದ ಮಾಡಬಹುದು ; ಪತಿಗೆ ಪತ್ನಿಯು ಆಶೀರ್ವಾದ ಮಾಡಬಾರದೇನೇ ?

ವಿಷ್ಣು—ಕುಮಾರ, ನಹುಷ, ಈ ಚಕ್ರವನ್ನು ಧರಿಸು,

ನಹುಷ—ಆಜ್ಞೆ.

ಗೌರಿ—ಅಳಿಯನೇ-ನಹುಷಾ, ವಿರೋಧಿಯನ್ನು ಗೆಲ್ಲು ; ನಮ್ಮ ಕುಮಾರಿಯೊಡನೆ ಅನೇಕಕಾಲ ಸುಖವಾಗಿ ಬಾಳು.

ಶಾರದೆ—ಅಳಿಯನೇ ನಹುಷಾ, ಎನ್ನುವದೇತಕ್ಕೆ ? ಗೌರೀ—ಅಣ್ಣನೇ ಮಾಧವ ಎಂದೇ ಹೇಳಬಾರದೇ ?

ಈಶ್ವರ—ಅಳಿಯಂದಿರೇ, ಈ ತ್ರಿಶೂಲವನ್ನು ತೆಗೆದುಕೊಳ್ಳಿ ; ಆ ದುಂಡನನ್ನು ಸಂಹರಿಸಿರಿ.

ನಹುಷ—ಆಜ್ಞೆ.

ವಸಿಷ್ಠ—ಇದೇನು ತಮ್ಮ, ನಾರದ, ನೀನು ವಿರಚಿಸಿರುವ ಈ ಲೀಲೇ !!

ನಾರದ--ಅಹುದು—ಅಗ್ರಜ, ಆ ದುಂಡನು ಜಗವೊಂಡನು, ಬಲು ಭಂಡನು, ಮಹಾ ಪ್ರಚಂಡನು, ಬರಿಯ ಚಕ್ರಕ್ಕೆ ಸಾಯುವವನಲ್ಲ ; ಕೇವಲ ತ್ರಿಶೂಲಕ್ಕೆ ಬಗ್ಗುವವನಲ್ಲ ; ಬರಿಯ ಬ್ರಹ್ಮಾಸ್ತ್ರಕ್ಕೆ ಹೆದರುವವನಲ್ಲ ; ಅದಕ್ಕಾಗಿ ಈ ತ್ರಿಮೂರ್ತಿಗಳ ಶಕ್ತಿಯನ್ನೂ ಒಂದುಕಡೆ ಸೇರಿಸುವದಕ್ಕಾಗಿ, ಹೀಗೆ ಮಾಡಿದೆನು ; ಇಷ್ಟೇ ಅಲ್ಲ, ಆ ಪತಿವ್ರತೆಯಾದ ಅಶೋಕಸುಂದರಿಯ ಪಾತಿವ್ರತ್ಯದ ತೇಜಸ್ಸನ್ನೂ, ಈ ನಹುಷನ ಬಲಕ್ಕೆ ಸೇರಿಸಿರುವೆನು.

ವಸಿಷ್ಠ—ಯುಕ್ತ, ಯುಕ್ತ, ಸಾಧುವಾದ ಕಾರ್ಯ ; ಒಳ್ಳೆಯ ಯುಕ್ತಿ !! ಮುಂದೆ ಏನು ಮಾಡಬೇಕೆನ್ನುವಿ ?

ನಾರದ—ಮಾಡುವದೇನು ; ನಹುಷನೂ ದುಂಡನೂ ಯುದ್ಧಮಾಡುತ್ತಿರಲಿ ; ನಾವು ಇವರನ್ನೆಲ್ಲಾ ಕರೆದುಕೊಂಡು ನಿಮ್ಮ ಆಶ್ರಮಕ್ಕೆ ಹೋಗುವ.

ವಸಿಷ್ಠ—ಏತಕ್ಕಾಗಿ ?

ನಾರದ—ನಹುಷನು ವಿಜಯಿಯಾಗಿ ಬರುವನಷ್ಟೆ ! ಆಶ್ರಮದಲ್ಲಿ ಯಥಾವಿಧಿಯಿಂದ ಅಶೋಕಸುಂದರಿಯನ್ನು ಕೊಟ್ಟು ನಹುಷನಿಗೆ ಲಗ್ನಮಾಡಿಬಿಡುವ.

ವಸಿಷ್ಠ—ಆಯುಮಹಾರಾಜನನ್ನೂ ಆತನ ಪತ್ನಿ ಇಂದುಮತೀದೇವಿಯನ್ನೂ ಬರಮಾಡಬೇಡವೇ ?

ನಾರದ—ಅವರನ್ನುಳಿದು ಕಾರ್ಯವೇನಿದೆ ? ಮೊದಲು ಅವರನ್ನು ಕರೆಸಬೇಕು.

ವಿಷ್ಣು—ನಾರದ, ಮುಂದೆ ಏನು ನಿನ್ನ ಲೀಲೆ ?

ನಾರದ—ಸರ್ವರೂ ದಯಮಾಡಿಸಬೇಕು, ಈ ನಮ್ಮ ಅಗ್ರಜರ ಆಶ್ರಮಕ್ಕೆ—

ಗೌರಿ—ಅದೇನು, ವಿಚಾರ, ನಾರದ ?

ನಾರದ—ನಿನ್ನ ಕುಮಾರಿಯಾದ ಅಶೋಕಸುಂದರಿಯನ್ನು ಈ ನಹುಷನಿಗೆ ಧಾರಾ ಪೂರ್ವಕ, ವಹಿಸುವದಕ್ಕೆ.

ವಸಿಷ್ಠ—ತ್ರಿಮೂರ್ತಿಗಳೂ ಅವರ ಪತ್ನಿಯರೂ ಸೇರಿಬಂದು, ನನ್ನ ಕುಟೀರದಲ್ಲಿ ವಿವಾಹ ಮಹೋತ್ಸವವನ್ನು ನೆರವೇರಿಸುವರಲ್ಲವೆ; ಇಂತಹ ಭಾಗ್ಯವು ಮತ್ತಾರಿಗೆತಾನೇ ಉಂಟು !! ಬನ್ನಿ ಸರ್ವರೂ—

ಶಾರದೆ—ಏನು ಲೀಲೆ ಇದು !

ಗೌರಿ—ಇದು ನಾರದನ ಲೀಲೆ !!

ಲಕ್ಷ್ಮಿ—ವಿಚಿತ್ರ ಲೀಲೆ ಇದು ; ತ್ರಿಮೂರ್ತಿಗಳ ಲೀಲೆಗೂ ಮೀರಿದ್ದು !!!

ವಿಷ್ಣು—ಭಾವ- ಶಂಕರದೇವ, ಬಾಲಕ ಬ್ರಹ್ಮ, ಬನ್ನಿ—ಬನ್ನಿ.

ಈಶ್ವರ—ತಂಗೀ ಶಾರದಾ, ಬ್ರಹ್ಮದೇವ, ಎಲ್ಲರೂ ಬನ್ನಿ. (ಹೋಗುವರು)

ನಾರದ—ನಹುಷನೇ, ನೀನು ಇಲ್ಲೇ ಇರು ; ಅಶೋಕಸುಂದರಿಯು ಬಹುಶಃ ಬಂದಾಳು ; ದುಂಡನ ಸಂಹಾರಾನಂತರ ನೀನು ವಸಿಷ್ಠಾಶ್ರಮಕ್ಕೆ ಬಂದರೆ, ಅಲ್ಲಿ ಸರ್ವರೆದುರಿಗೆ, ನಾರದರ ಆಜ್ಞೆಯನ್ನು ಪಡೆದು. ನಿನ್ನನ್ನು ವರಿಸುವೆನು, ಎಂದು ಹೇಳಿಬಿಡು.

ನಹುಷ—ಹಾಗೆಯೇ ಮಾಡುವೆನು.

ನಾರದ—ಆ ಬಾಲಕಿಯ ರೂಪಕ್ಕೆ ಮೋಹಿತನಾಗಿ, ಹಲ್ಲುಬಿಡುತ್ತಾ ನಿಂತುಕೊಂಡು ಬಿಡಬೇಡ ; ಯುದ್ಧವನ್ನೇ ಮರೆತುಬಿಟ್ಟೀಯೆ, ಜೋಕೆ.

ನಹುಷ—ಇಲ್ಲ ನಾರದರೇ, ನಾನು ಹಾಗೆ ಮೋಸಹೋಗುವೆನೇ ?

ನಾರದ—ನೀನಾದರೇನು, ಯಾರಾದರೇನು, ಸುಂದರೀಮಣಿಯರನ್ನು ಕಂಡರೆ ಭ್ರಾಂತರಾಗಿ ಮಾಡುವ ಕಾರ್ಯವನ್ನೇ ಮರೆತು ನಿಲ್ಲುವದು ಲೋಕಸ್ವಭಾವ ; ಎಂತೆಂತವರಿಗೂ ಆ ಸ್ತ್ರೀವ್ಯಾಮೋಹವು ತಪ್ಪಿದ್ದಲ್ಲ.

ನಹುಷ— ಬಹು ಎಚ್ಚರದಿಂದಿರುವೆನು, ನಾರದರೇ.

ನಾರದ—ಈ ತಂಬೂರಿಯನ್ನು ಹಿಡಿ ; ಇದು ಈಗ ನಿನ್ನ ಬಳಿಯಲ್ಲಿರುವ ಎಲ್ಲ ದಿವ್ಯಾಸ್ತ್ರಗಳಿಗಿಂತಲೂ ಮೀರಿದ ಅಸ್ತ್ರವು ; ಇದು ಹತ್ತಿರವಿದ್ದರೆ ಸ್ತ್ರೀಯರ ಭ್ರಾಂತಿಯು ಹುಟ್ಟುವದಿಲ್ಲ ; ಅಲ್ಲದೆ ಯಾವ ಕಾಲಕ್ಕೆ ಏನು ಮಾಡಬೇಕೆನ್ನುವ ಮುಂದಿನ ಜ್ಞಾನವನ್ನು ಇದು ಬಹು ಚನ್ನಾಗಿ ಎಚ್ಚರಿಸಿ ಕೊಡುವದು. (ಕಿವಿಯಲ್ಲಿ)

ನಹುಷ—ಆಜ್ಞೆ.

ನಾರದ—ಈ ಪೃಥ್ವಿಯಲ್ಲಿ ನಾನು ನನ್ನ ತಂಬೂರಿಯನ್ನು ಯಾರಿಗೂ ಕೊಟ್ಟವನಲ್ಲ. ಇದೇ ನನ್ನ ಪ್ರಾಣ. ನೀನು ನನ್ನವನಾದ್ದರಿಂದ ನಿನಗೆ ಮಾತ್ರ ಅನು

ಗ್ರಹಿಸಿ ಕೊಟ್ಟಿರುವೆನು. ಆದರೆ ಮರಳಿ ಬರುವಾಗ ಹುಡುಗಿಯ ಸಂಭ್ರಮದಲ್ಲಿ ತಂಬೂರಿಯನ್ನು ಮರೆತು ಬಂದೀಯೆ, ಜೋಕೆ; (ತನ್ನಲ್ಲಿ) ಲಕ್ಷ್ಮೀಪತಿಯಾದ ಈ ವಿಷ್ಣುವೂ ಕೂಡ ನಾರದನ ಸಹವಾಸಕ್ಕೆ ಬಿದ್ದಪ್ಪರಿಂದ ಬಡದಾಸರು ಹಿಡಿಯುವ ತಂಬೂರಿಯನ್ನು ತಾನೂ ಹಿಡಿಯಬೇಕಾಯಿತು! ಗ್ರಹಚಾರವು ಬಂದರೆ ಆಗಬೇಕಾದುದೆಲ್ಲಾ ಆಗಿಯೇ ಆಗುವದು! (ಹೋಗುವನು)

ನಹುಷ—ಆ ನಮ್ಮ ತಂದೆಯಾದ ವಸಿಷ್ಠ ಮಹಾಮುನಿಗಳು ನನಗೆ ದಿವ್ಯಾಸ್ತ್ರ ಪ್ರಯೋಗೋಪಸಂಹಾರಗಳನ್ನೂ ಲಕ್ಷ್ಯ ಭೇದಗಳನ್ನೂ ಚನ್ನಾಗಿ ಕಲಿಸಿ ಕೊಟ್ಟಿರುವರು. ಈಗ ಈ ತ್ರಿಮೂರ್ತಿಗಳಿಂದ ಲಬ್ಧವಾದ ದಿವ್ಯಾಸ್ತ್ರಗಳು ನನ್ನಲ್ಲಿವೆ. ಆ ದುಂಡನನ್ನು ಯುದ್ಧದಲ್ಲಿ ಸಂಹರಿಸಿ ಲೋಕಕ್ಷೇಮವನ್ನುಂಟುಮಾಡುವೆನು.

ಅಶೋ—ಎಷ್ಟುಕಾಲವಾಯಿತು? ನಾನು ಇನ್ನೆಷ್ಟು ದಿನಗಳು ಹೀಗೆ ತಪಸ್ಸಿನಲ್ಲಿ ಕಾಲ ಕಳೆಯುತ್ತಿರಲಿ? ನಮ್ಮ ಮಾತೆಯಾದ ಪಾರ್ವತಿಯು ನಹುಷನನ್ನೇ ವರಿಸುವಂತೆ ಹೇಳಿದಳು; ಅಂದಿನಿಂದ ಆ ನಹುಷನಲ್ಲೇ ನೆಟ್ಟ ಮನವುಳ್ಳವಳಾಗಿ, ಆತನ ಆಗಮನವನ್ನೇ ನಿರೀಕ್ಷಿಸುತ್ತಿರುವೆನು; ಆ ನನ್ನ ನಾಥನ ಸಮಾಗಮವು ಎಂದಿಗಾಗುವದೋ! ದುಂಡನ ಸಂಹಾರವು ಎಂದಿಗೆ ಆಗುವದೋ ಕಾಣೆನಲ್ಲ!!

ನಹುಷ—ದುಂಡನ ಸಂಹಾರಕ್ಕಾಗಿಯೇ ಕಾದು ನಿಂತಿರುವನು; ನಹುಷನು, ಇಲ್ಲೀ—

ಅಶೋ—ಆಹಾ! ಏನು ಕಾಂತಿ! ಎಂತಹ ತೇಜಸ್ಸು! ಈ ಮಹಾನುಭಾವನೇ ನನ್ನ ನಾಥನೇ!!

ನಹುಷ—ನಾನು ನಹುಷನು; ನಿನ್ನ ನಾಥನಲ್ಲ,

ಅಶೋ—ತಾವು ನಹುಷನಾದರೆ ತಾವೇ ನನ್ನ ನಾಥರು; ನಿಮ್ಮನ್ನು ಕಂಡ ನನ್ನ ಅದೃಷ್ಟವೇ ಸ್ತೋತ್ರಾರ್ಹವಾದದ್ದು. (ಆಲಿಂಗಿಸಲು ಬರುವಳು)

ನಹುಷ—ಹಾ—ಹಾ—ಮುಟ್ಟಬೇಡ; ಜೋಕೆ—ದೂರ ನಿಲ್ಲು.

ಅಶೋ—ಏತಕ್ಕೆ? ನೀವು ನಹುಷನಲ್ಲವೆ?

ನಹುಷ—ಅಹುದು, ನಾನೇ ನಹುಷನು.

ಅಶೋ—ಆದರೆ ನೀವೇ ನನ್ನ ನಾಥರು.

ನಹುಷ—ನಾನು ನಿನ್ನ ನಾಥನಲ್ಲ.

ಅಶೋ—ನಹುಷನೇ ನನ್ನ ನಾಥನು ; ನೀವೇ ನಹುಷನಾದಮೇಲೆ ನನ್ನ ನಾಥರೂ ನೀವೇ ; ನನ್ನನ್ನು ಆಲಿಂಗಿಸಿ ಮನಶ್ಶಾಂತಿಯನ್ನುಂಟುಮಾಡಿ ಕಾಪಾಡಿ.

ನಹುಷ—ನಾನು ನಹುಷನೇ ಅಹುದು ; ಆದರೆ ನಿನ್ನ ನಾಥನು ಅಲ್ಲ.

ಅಶೋ—ಅದೇತಕ್ಕೆ ?

ನಹುಷ—ದುಂಡನ ಸಂಹಾರವಾದಮೇಲೆ ಈ ನಹುಷನು ಒಂದುವೇಳೆ ನಿನ್ನ ನಾಥನು ಆದರೂ ಆಗಬಹುದು.

ಅಶೋ—ನಾಥನಾದರೂ ಆಗಬಹುದೆಂದು ಸಂದೇಹವನ್ನೇತಕ್ಕೆ ಸೂಚಿಸುತ್ತಿರುವಿರಿ?

ನಹುಷ—ಅಹುದು, ದುಂಡನು ಅಂತಹ ಪ್ರಚಂಡನು, ಅವನನ್ನು ಸಂಹರಿಸುವದೇನು ಸಾಮಾನ್ಯಕಾರ್ಯವಲ್ಲ.

ಅಶೋ—ದುಂಡನ ಸಂಹಾರಕ್ಕೆ ಸಂದೇಹವೇನಿದೆ ; ನನ್ನ ಶಾಪವೇ ಅವನನ್ನು ಈಗಾಗಲೇ ಮುಕ್ಕಾಲುಪಾಲು ನಿರ್ವೀರ್ಯನನ್ನಾಗಿ ಮಾಡಿದೆ ; ನಿಮಿತ್ತ ಮಾತ್ರಕ್ಕೆ ತಾವು ಯುದ್ಧಮಾಡಿದರೂ ಸಾಕು ; ಆ ನೀಚನು ಸತ್ತೇ ಸಾಯುವನು. ಅವನು ಸತ್ತಮೇಲೆ ನಾನು ತಮ್ಮ ಪತ್ನಿಯಾಗುವದರಲ್ಲಿ ಸಂದೇಹವೇನಿದೆ ?

ನಹುಷ—ನಮ್ಮ ಅತ್ತೆ ಮಾವಂದಿರಾದ ಪಾರ್ವತೀ ಪರಮೇಶ್ವರರು ಒಪ್ಪಿ, ನಮ್ಮ ತಂದೆ ತಾಯಿಗಳಾದ ವಿಷ್ಣು ಲಕ್ಷ್ಮಿಯರು ಒಪ್ಪಿ, ನನ್ನ ಅಜ್ಜಿ ತಾತನಾದ ಸರಸ್ವತಿ ಬ್ರಹ್ಮರು ಒಪ್ಪಿ,—

ಅಶೋ—ಒಪ್ಪುವದೇನು, ಅವರನ್ನು ಬೇಡಿಕೊಂಡು ನಾನು ಒಪ್ಪಿಸುವೆನು.

ನಹುಷ—ಇವರೆಲ್ಲರೂ ಒಪ್ಪಿದರೂ, ಮತ್ತೊಂದು ದೊಡ್ಡ ಪ್ರತಿಜ್ಞೆಯುಂಟು,—ನನ್ನದು.

ಅಶೋ—ಅದೇನು ? ತಮ್ಮ ಪ್ರತಿಜ್ಞೆ ?

ನಹುಷ—ಪ್ರಪಂಚದಲ್ಲಿ ಈಗ ಅವಿವೇಕದಿಂದ ಹೆಚ್ಚುತ್ತಿರುವ, ಶಿವಭಕ್ತರ ವಿಷ್ಣುಭಕ್ತರ ಪರಸ್ಪರ ವೈರವನ್ನು, ಅಂತಃಕಲಹವನ್ನೂ, ವಿವಾದವನ್ನೂ, ನಿಶ್ಶೇಷವಾಗಿ ತಪ್ಪಿಸಿ, ಶಿವಭಕ್ತ ವಿಷ್ಣುಭಕ್ತರಿಗೆ ಯಾವ ಮಹನೀಯಳು ಮೈತ್ರಿಯನ್ನು ಹೆಚ್ಚಾಗಿ ಉಂಟುಮಾಡಿ, ಲೋಕ ಕ್ಷೇಮವನ್ನು ಮಾಡುವಳೋ, ಅಂತಹವಳನ್ನೇ ನಾನು ಪತ್ನಿಯಾಗಿ ವರಿಸುವೆನೆಂದು ಪ್ರತಿಜ್ಞೆ ಮಾಡಿರುವೆನು.

ಅಶೋ—ಈ ತಮ್ಮ ಪ್ರತಿಜ್ಞೆಯನ್ನು ನಡೆಯಿಸಲು ನಾನು ಸಿದ್ಧಳಾಗಿರುವೆನು.

ನಹುಷ—ಇದಕ್ಕೆ ಸಾಕ್ಷಿ ಯಾರು ? ಒಂದುವೇಳೆ ತಪ್ಪಿದರೇ—

ಅಶೋ—ಉರಿಯುತ್ತಿರುವ ಚಂದ್ರ ಸೂರ್ಯರೇ ಸಾಕ್ಷಿ; ನಾನು ಭಾಷೆಗೆ ತಪ್ಪಿದರೆ ನನಗೆ ರೌರವಾದಿ ನರಕಗಳೇ ಉಂಟಾಗಲಿ.

ನಹುಷ—ಚಂದ್ರಸೂರ್ಯರ ಸಾಕ್ಷಿ ಸಾಲದು; ಜಗದ್ವಿಖ್ಯಾತರಾದ ಆ ನಾರದ ಮಹಾ ಮುನಿವರ್ಯರು ಇದಕ್ಕೆ ಸಮ್ಮತಿಸಬೇಕು; ಅವರನ್ನು ಒಪ್ಪಿಸುವದಾದರೆ, ದುಂಡನ ಸಂಹಾರಾನಂತರ, ನಾನು ನಿನ್ನನ್ನು ವರಿಸುವೆನು.

ಅಶೋ—ಆ ಮಹಾತ್ಮರೆಲ್ಲಿರುವರು ?

ನಹುಷ—ಅವರು ನಮ್ಮ ತಂದೆಯಾದ ವಸಿಷ್ಠರ ಆಶ್ರಮದಲ್ಲಿರುವರು.

ಅಶೋ—ನಾನು ಈಗಲೇ ಹೋಗಿ ಆ ಮಹಾಮಹಿಮರನ್ನು ಕಂಡು, "ಲೋಕದ ಲ್ಲಿರುವ ಶಿವಭಕ್ತ ವಿಷ್ಣುಭಕ್ತರ ನಿಷ್ಕಾರಣವಾದ ವೈರವನ್ನು ತಪ್ಪಿಸಿ ಶಾಂತಿ ಯನ್ನುಂಟುಮಾಡುವೆನು" ಎಂದು ಅವರಿಗೆ ಪ್ರಮಾಣ ಪೂರ್ವಕ ವಿಜ್ಞಾ ಪಿಸಿಕೊಳ್ಳುವೆನು. (ಹೋಗುವಳು)

ನಹುಷ—ನನ್ನ ಈ ಏಕಾದಶಾವತಾರದ ಮುಖ್ಯ ಉದ್ದೇಶವು ಇದೇ; ಹರಿಹರಾ ಭೇದವನ್ನು ಲೋಕದಲ್ಲಿ ಹರಡುವಿಕೆ; ಇದನ್ನು ನೆರವೇರಿಸುವದಕ್ಕೆ ಈ ಪತಿವ್ರತೆಯು ಒಪ್ಪಿಕೊಂಡಿರುವಳು. ಇನ್ನು ಆ ದುಂಡನನ್ನು ಸಂಹರಿಸು ವದು ಮಾತ್ರವೇ ಉಳಿದಿರುವದು. ಅವನು ಯಾವಾಗ ಬರುವನೋ ಕಾಣೆನಲ್ಲಾ.

ದುಂಡ—(ಬಂದು) ಆ ಪಾಪಿಯಾದ ನಹುಷನು ಸಾಯಲಿಲ್ಲ. ಆ ಚಂಡಾಲನೂ ಸ್ವಾಮಿದ್ರೋಹಿಯೂ ಆದ ನನ್ನ ಅಡಿಗೆಯವನು, ಆ ಶಿಶುವನ್ನು ಕತ್ತರಿಸದೆ ಬಿಟ್ಟುಬಿಟ್ಟದ್ದು, ನನಗೆ ಇಷ್ಟು ಕಷ್ಟಕ್ಕೆ ಬಂದಿತು; ಆ ನನ್ನ ವೈರಿಯಾದ ನಹುಷನು ಇಲ್ಲೇ ಎಲ್ಲೋ ನಂದನವನ ಪ್ರಾಂತದಲ್ಲಿರುವನೆಂದು ನನ್ನ ದೂತರು ತಿಳಿಸಿದರು. ಆ ನೀಚನು ಸಿಕ್ಕಿದರೆ ಸಾಕು; ಕತ್ತರಿಸಿ ತುಂಡು ತುಂಡಾಗಿ ಮಾಡಿ ನನ್ನ ಕೋಪವನ್ನು ಶಾಂತಪಡಿಸಿಕೊಳ್ಳುವೆನು. ಮುಖ್ಯ ವಾಗಿ ಆ ಅಶೋಕಸುಂದರಿಗೆ ನಾನೇ ಪತಿಯಾಗಬೇಕು.

ನಹುಷ—(ತನ್ನಲ್ಲಿ) ದುಂಡನು ರೌದ್ರಾವೇಶನಾಗಿ ಬಂದಿರುವನು. ಇವನಿಗೆ ಆಯುಃಪರಿಮಿತಿಯು ಮುಗಿದು ಬಂದಿದೆ.

ದುಂಡ—ಆ ಲಾವಣ್ಯಾದ ಗಣಿಯಾದ ಅಶೋಕಸುಂದರಿಗೆ ನಾನೇ ಪತಿಯಾಗಬೇಕು.

ನಹುಷ—ಆ ಅಶೋಕಸುಂದರಿಯು ಪತಿಯು ನಹುಷನು.

ದುಂಡ—ಏನು ? ಅಶೋಕಸುಂದರಿಗೆ, ದುಂಡನಲ್ಲವೆ ಪತಿ ?

ನಹುಷ—ದುಂಡನಲ್ಲ; ದುಂಡನು ಮೃತ್ಯುದೇವಿಗೆ ಪತಿ; ನಹುಷನು ಅಶೋಕ

ಸುಂದರಿಯ ಪತಿ. ಅಶೋಕಸುಂದರಿಯು ನಹುಷನನ್ನು ಆಲಿಂಗಿಸುವಳು ; ಆ ಮೃತ್ಯುದೇವಿಯು—

ದುಂಡ—ಛೀ,—ಅಧಮ, ನೀನಾರೋ ? ಹೀಗೆ ಬಗುಳುತ್ತಿರುವವನು ?

ನಹುಷ—ನೀನು ಯಾರಿಗಾಗಿ ಹುಡುಕುತ್ತಾ ತಿರುಗುತ್ತಿರುವೆಯೋ ಅವನೇ ನಾನು.

ದುಂಡ—ನಾನು ಯಾವಾಗಲೂ ಹುಡುಕುತ್ತಿರುವದು ನನ್ನ ವೈರಿಯನ್ನು.

ನಹುಷ—ಆದರೆ ನಾನೇ ನಿನ್ನ ವೈರಿ.

ದುಂಡ—ಏನು ನೀನು ನನ್ನ ವೈರಿಯೋ ?

ನಹುಷ—ಅಹುದು, ವೈರಿ, ಶತ್ರು, ನಿನ್ನಭಾಗದ ಯಮ—

ದುಂಡ—ಛೀ—ಯಮನಲ್ಲ ; ನನಗೆ ಬೇಕಾಗಿರುವವನು ; ನನಗೆ ಬೇಕಾದವನು ಆ ನಹುಷ.

ನಹುಷ—ಆ ನಹುಷನೆಲ್ಲಿ ಬಂದನೋ ಹುಚ್ಚ !! ಈ ನಹುಷ !! ಇವನೇ ನಿನ್ನ ವೈರಿ.

ದುಂಡ—ಸರಿ-ಸರಿ-ವೈರಿಯು ಸಿಕ್ಕಿದನು. ಎಲಾ ನೀಚ, ಇಂದಿಗೆ ನನ್ನ ಆಶೆಯು ಪೂರ್ತಿಯಾಯಿತು ; ನಾನೇ ಧನ್ಯನು.

ನಹುಷ—ಸಂದೇಹವೇನು, ಈಗ ನಿನ್ನ ಆಶೆಯು ಪೂರ್ತಿಯಾಗಿ ಹೋಗುವದು ; ಇಷ್ಟರಲ್ಲೇ .

ದುಂಡ—ಬಾರೋ—ರಣಹೇಡಿ, ಹೆಚ್ಚು ಹರಟಬೇಡ—ಯುದ್ಧಕ್ಕೆ ಸಿದ್ಧನಾಗು ; ಈ ಬಾಣವನ್ನು ತಡೆದುಕೋ. (ಬಿಡುವನು)

ನಹುಷ—ಇದು ನೋಡು, ಬ್ರಹ್ಮಾಸ್ತ್ರ, ಮತ್ತಾವುದೂ ಅಲ್ಲ ; ಇದನ್ನು ನೀನು ತಡಿ ದುರಾತ್ಮ, (ಬಿಡುವನು)

ದುಂಡ—ಆ ಗೊಡ್ಡು ಹಾರುವನ ಅಸ್ತ್ರವೋ ಇದು ? ಆ ಬಡ ವೈದಿಕನಾದ ಬ್ರಹ್ಮನ ಅಸ್ತ್ರ ; ಅವನ ಅಸ್ತ್ರವಾದಮೇಲೆ ಕೇಳುವದೇನು ; ಅವನಂತೆ ಅವನ ಬ್ರಹ್ಮಾಸ್ತ್ರವೂ ಗೊಡ್ಡೆ ; ಬಡಹಾರುವನ ಅಸ್ತ್ರಕ್ಕೆ ಪರಾಕ್ರಮವು ಎಲ್ಲಿ ಬರುವದು ? ಹೇಳು. ಆಯಿತೆ ! ನಿನ್ನ ಬ್ರಹ್ಮಾಸ್ತ್ರ ! ಇಗೋ ನೋಡು-ಹೀಗೆ ಮುರಿದುಹಾಕುವೆನು. (ಮುರಿಯುವನು)

ನಹುಷ—ಬಡ ಹಾರುವನಾದ ವಸಿಷ್ಠನ ಅಸ್ತ್ರವನ್ನು, ಜಗದ್ಭಯಂಕರ ಕ್ಷತ್ರಿಯ ನಾದ ವಿಶ್ವಾಮಿತ್ರನು, ಗೆಲ್ಲಲಾರದೆ ಹಲ್ಲು ಬಿಟ್ಟನು. ವೃತ್ರಾಸುರನನ್ನು ಕೊಲ್ಲಲಾರದೆ, ತ್ರಿಲೋಕಾಧಿಪತಿಯಾದ ದೇವೇಂದ್ರನು, ಬಡ ಹಾರುವ ನಾದ ದಧೀಚಿಯ ಬೆನ್ನು ಮೂಳೆಯನ್ನು ಯಾಚಿಸಬೇಕಾಯಿತು. ಪ್ರಪಂ

ಚಕ್ಕೇ ಭಯಂಕರರಾದ ಕ್ಷತ್ರಿಯ ವೀರರೆಲ್ಲಾ, ಬಡಹಾರುವನಾದ ಪರಶು ರಾಮನ, ಗಂಡು ಗೊಡಲಿಗೆ ಆಹುತಿಯಾಗಿ ಹೋದರು. ದುರಹಂಕಾರ ದಿಂದ ಮೆರೆಯುತ್ತಿದ್ದ ಸಮುದ್ರರಾಜನನ್ನು, ಬಡಹಾರುವನಾದ ಅಗಸ್ತ್ಯನು ಏಕಾಪೋಶನನವಾಗಿ ಕುಡಿದು ಬಿಟ್ಟನು. ದೇವಾದಿದೇವತೆಗಳೆಲ್ಲಾ ಸೇರಿ, ತ್ರಿಶಂಕುವನ್ನು ಸ್ವರ್ಗದಿಂದ ಒದ್ದು ತಳ್ಳಲು, ಬಡಹಾರುವನಾಗುತಿದ್ದ ವಿಶ್ವಾ ಮಿತ್ರನು, ಪ್ರತಿ ಸ್ವರ್ಗವನ್ನು ಮಾಡಿ ನಿಲ್ಲಿಸಿ ಬಿಟ್ಟನು. ಬಡಹಾರುವನಾದ ದೇವಲನ ಶಾಪಕ್ಕಾಗಿ, ಹಾಹಾ ಹೂಹೂ ಎಂಬ ಗಂಧರ್ವರು, ಎಷ್ಟೋ ಕೋಟಿವರ್ಷ, ಆನೆಯಾಗಿ, ಮೊಸಳೆಯಾಗಿ, ಬಿದ್ದಿದ್ದು ವಿಷ್ಣುವಿನಿಂದ ಉದ್ಧಾರನಾದರು. ಹೀಗಿರುವಾಗ, ಹಾರುವರನ್ನು ಧಿಃಕ್ಕಾರವಮಾಡುವ ನಿನ್ನ ನಾಲಿಗೆಯನ್ನು ಸೀಳಬೇಡವೆ ? ಅಥವು, ಹೋಗಲಿ-ಈ ತ್ರಿಶೂಲದಿಂ ದಲೇ ನಿನ್ನನ್ನು ಚುಚ್ಚಿ ಕೊಂದುಬಿಡುವೆನು. ಬಾ (ಚುಚ್ಚುವನು)

ದುಂಡ—ಇದು ತ್ರಿಶೂಲವೂ ! ಆ ಹೇಡಿಶಂಕರನ ದಿವ್ಯಾಸ್ತ್ರವೋ !! ರಾಕ್ಷಸರು ಹೊಡೆಯುವದಕ್ಕೆ ಬಂದರೆ, ಕದ್ದು ಓಡಿಹೋಗುವ ಅವನ ಆಯುಧಕ್ಕೆ, ಇನ್ನೇನು ತಾನೇ ಶೌರ್ಯವಿದ್ದೀತು ; ಇಗೋ ನಿನ್ನ ತ್ರಿಶೂಲ, ಆಯಿತೆ ? (ಕಿತ್ತಿಸೆಯುವನು)

ನಹುಷ—ಏನು ! ಇವನು ಬ್ರಹ್ಮಾಸ್ತ್ರವನ್ನು ಮುರಿದಿಟ್ಟನು, ತ್ರಿಶೂಲವನ್ನು ಕಿತ್ತು ಬಿಸಾಡಿದನು. ಇನ್ನೇನುಮಾಡಲಿ ; ಇವನು ನಾಯುವದು ಹೇಗೆ ?

ದುಂಡ—ಆ ಹೇಡಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರನ್ನು ನಂಬಿ, ಈ ರಣಧೀ ರನ ಮುಂದೆ, ನೀನು ಯುದ್ಧಕ್ಕೆ ನಿಲ್ಲಬಹುದೆ ! ಆ ನೀಚರ ದುರ್ಬಲಾಸ್ತ್ರ ಗಳು ನನ್ನಲ್ಲಿ ನಡೆದಾದರೂ ನಡೆಯುವವೆ ? ಎಲ್ಲೀ, ಬಿಡು—ಇನ್ನೇನು ಆ ಹೇಡಿಯಾದ ವಿಷ್ಣುವಿನ ಚಕ್ರವೊಂದು ಉಳಿದಿರುವದೇನೋ. ಅದನ್ನೂ ಬಿಟ್ಟುಬಿಡು.

ನಹುಷ—ಇಗೋ, ಇದರಿಂದಲೇ ನಿನಗೆ ಮರಣವೆಂದು ತೋರುವದು ; ಹಿಡಿ— ದುರ್ಮಾರ್ಗಿ, ದುರಹಂಕಾರೀ. (ಚಕ್ರವನ್ನು ಬಿಟ್ಟು) ಈಗಲಾದರೂ ಸಾಯಿ, ಪಾಪಿ.

ದುಂಡ—(ಕೈಲಿ ಚಕ್ರವನ್ನು ತಿರುಗಿಸುತ್ತಾ) ಆ ಹಾ ಹಾ ಹಾ-ಏನು ಚಕ್ರ ! ಏನು ಮಹಿಮೆ ! ಎಷ್ಟು, ಈ ಚಕ್ರದ ಅಟ್ಟಹಾಸ ! ಎಷ್ಟೋ ಕೋಟಿ ದೈತ್ಯ ರನ್ನು ಸಂಹಾರಮಾಡಿದ ಚಕ್ರವಿದು. ಎಲೋ ನಹುಷ, ಹೇಡಿ, ಆಯಿತೆ ನಿನ್ನ ವಿಷ್ಣು ಚಕ್ರ ? ಇಗೋ ನನ್ನ ಕೈಲಿ ಹೇಗೆ ಗಿರಗಿರನೆ ತಿರುಗುತ್ತಿರು ವದು ನೋಡು. ಇವೆಲ್ಲಾ ದಿವ್ಯಾಸ್ತ್ರಗಳೆಂದು ಹೇಳುವ ಮಂಕರನ್ನು ಎಷ್ಟು ನಿಂದಿಸಿದರೂ ತೀರದು ; ಆಯಿತೆ ನಿನ್ನ ಅಸ್ತ್ರಗಳೆಲ್ಲಾ ; ಇನ್ನೂ ಏನಾದರೂ ಇದೆಯೋ ? ಇದ್ದರೆ ಅವೂ ಬಂದೇಬಿಡಲಿ. ಈಚೆಗೆ—ನೋಡಿ ಯೇ ಬಿಡುವೆನು.

ನಹುಷ—ಇದೇನಿದು ಹೀಗಾಯಿತು ! ತ್ರಿಮೂರ್ತಿಗಳು ಪ್ರಪಂಚಕ್ಕೇ ಮೇಲಾದವರು, ಅವರೊಬ್ಬೊಬ್ಬರ ಅಸ್ತ್ರವೇ ಒಂದೊಂದು ಪ್ರಳಯವನ್ನು ಮಾಡಬಲ್ಲದು ; ಅಂತಹ ಮೂರು ದಿವ್ಯಾಸ್ತ್ರಗಳೂ, ಈ ನೀಚನಲ್ಲಿ ನಿಷ್ಫಲವಾದವಲ್ಲ ; ಈ ದುಷ್ಟನು ಇನ್ನೆಂತಹ ಪ್ರತಾಪಶಾಲಿ !! ಇವನನ್ನು ಸಂಹರಿಸದ ಮೇಲೆ, ನನ್ನ ಅವತಾರವೇ ನಿಷ್ಫಲವಾಗುವದಲ್ಲ ! ಅಪಹಾಸ್ಯಕ್ಕೆ ಆಕರವಾಗುವದಲ್ಲ !

ದುಂಡ—ಏತಕ್ಕೆ ದುಃಖಿಸುವೆ ? ನೀನು ಹೇಗೂ ನನ್ನನ್ನು ಗೆಲ್ಲಲಾರೆ ; ಸುಮ್ಮನೆ ನನ್ನ ಕಾಲಿಗೆ ನಮಸ್ಕಾರಮಾಡಿ, ನಿನ್ನ ಪತ್ನಿಯಾದ ಅಶೋಕಸುಂದರಿಯನ್ನು ನನಗೆ ಕಾಣಿಕೆಯಾಗಿ ಒಪ್ಪಿಸಿ, ಶರಣಾಗತನಾಗು ; ಜೀವಸಹಿತ ಬಿಡುವೆನು—ನಹುಷ.

ನಹುಷ—ಈ ನೀಚನ ವಾಗ್ಬಾಣವು ನನ್ನನ್ನು ಬಹುವಾಗಿ ನೋಯಿಸುತ್ತಿರುವದಲ್ಲ. (ಯೋಚಿಸಿ) ಆಹಾ ! ''ಎಲ್ಲಕ್ಕೂ ಮೀರಿಬಂದರೆ, ನನ್ನ ತಂಬೂರಿಯೇ ನಿನ್ನನ್ನು ಕಾಯುವದು'' ಎಂದು ನಾರದರು ಕಿವಿಯಲ್ಲಿ ಹೇಳಿದ್ದರು ; ನಿಶ್ಚಯ ಆಪತ್ಕಾಲ, ಆ ತಂಬೂರಿಯನ್ನೇ ಕೈಲಿ ತೆಗೆದುಕೊಳ್ಳುವೆನು. (ತಂಬೂರಿ ಎತ್ತುವನು)

ದುಂಡ—ಆಹಾಹಾಹಾ ! ಅಯ್ಯೋ ! ಮೂಢ, ದಿವ್ಯಾಸ್ತ್ರಗಳೆಲ್ಲವೂ ಮುಗಿದುಹೋದವೆಂದು, ಈಗ ನನ್ನನ್ನು ಕೊಲ್ಲುವದಕ್ಕೆ, ಈ ಬಡದಾಸರ ತಂಬೂರಿ ತೆಗೆದುಕೊಂಡೆಯೋ ? ಈ ಹಾರುವನ ತಂಬೂರಿಯು ನನ್ನನ್ನು ಕೊಲ್ಲುವದೋ ?

ನಹುಷ—ಬ್ರಾಹ್ಮಣಶ್ರೇಷ್ಠನಾದ ನಾರದನ ತಂಬೂರಿ ಇದು. ಬಡಹಾರುವರಿಗೆ ಪ್ರತಾಪವೆಲ್ಲಿಯದೆಂದು ಜರಿದೆಯಲ್ಲವೆ ? ಹಾರುವನ ಪ್ರತಾಪದ ಮಹಿಮೆಯನ್ನು ಈಗ ಈ ತಂಬೂರಿಯು ನಿನಗೆ ಗೊತ್ತುಮಾಡಿಕೊಡುವದು. ಇದೇ ನಿನ್ನಂತಹ ದುರ್ಮಾರ್ಗಕ್ಷತ್ರಿಯನನ್ನು ಧ್ವಂಸಮಾಡುವ ದಿವ್ಯಾಸ್ತ್ರ; ಈ ಪೆಟ್ಟನ್ನು ತಡಿ ; ನಿನ್ನ ತಲೆಯು ಇದರಿಂದ ಪುಡಿಪುಡಿಯಾಗದೆ ಹೋಗಲಾರದು. ''ದ್ವಿಜೋತ್ತಮರೇ, ನಿಜವಾಗಿಯೂ ನಿಮ್ಮಲ್ಲಿ ಒಂದು ವಿಧವಾದ ಬ್ರಹ್ಮಶಕ್ತಿಯು ಇರುವದೇ ನಿಶ್ಚಯವಾಗಿದ್ದರೆ, ಈಗ ಈ ನೀಚನನ್ನು ಈ ತಂಬೂರಿಯು ಸಂಹರಿಸಿ, ಲೋಕಕ್ಕೆ ನಿಮ್ಮ ಮಹಿಮೆಯನ್ನು ತೋರಿಸಿಕೊಡಲಿ.'' (ಹೊಡೆಯುವನು)

ದುಂಡ—ಹಾ—ಸತ್ತೆ—ಸತ್ತೆನು ; ದಿವ್ಯಾಸ್ತ್ರಗಳಿಂದಲೇ ಸಾಯದಿದ್ದ, ಈ ಲೋಕೈಕವೀರನಾದ ದುಂಡನು, ಬಡಹಾರುವನಾದ ಬಡನಾರದನ ಈ ಬಡತಂಬೂರಿಯ ಬಡಿತಕ್ಕೆ ಬಡನಾಗಿ ಒಡಲನ್ನು ಬಿಡಬೇಕಾಯಿತಲ್ಲ ! ಹಾ—ಸತ್ತೆ, ಎಲೆಲಾ ನಾರದ, ದರಿದ್ರಬ್ರಾಹ್ಮಣ ! ಏನು ನಿನ್ನ ಮಹಿಮೆ !! ಅಬ್ಬಬ್ಬ!!! (ಸಾಯುವನು)

ನಹುಷ—ಮಹಾತ್ಮನು—ನಾರದನು ; ಪ್ರಪಂಚಕ್ಕೇ ತಿಲಕಪ್ರಾಯನು, ಲೋಕ ಮಾನ್ಯನು, ಈ ತಂಬೂರಿಯೇ ದಿವ್ಯಾಸ್ತ್ರವು, ನಹುಷನ ಅವತಾರವನ್ನು ಸಾರ್ಥಕಪಡಿಸಿದುದೇ ಈ ನಾರದರ ತಂಬೂರಿ ; ಮನೆಮನೆಗೂ ತಿರುಗುವ ಬಡಬ್ರಾಹ್ಮಣರು ನಾರದರು, ಶ್ರೀವರ ಮಹಿಮೆಯನ್ನು ಬಲ್ಲವರೇ ಬಲ್ಲರು ; ನಾನೀಗಲೇ ವಸಿಷ್ಠಾಶ್ರಮಕ್ಕೆ ಹೋಗಿ, "ಬಡಬ್ರಾಹ್ಮಣನ ತಂಬೂರಿಯ ಶಕ್ತಿಯಿಂದ, ಲೋಕಕಂಟಕನಾದ ದೈತ್ಯನು ಮೃತನಾದನು" ಎಂಬ ಶುಭ ವಾರ್ತೆಯನ್ನು, ಸರ್ವರಿಗೂ ತಿಳಿಸುವೆನು. ಆಹಾಹಾ ! ನಾರದ ! ಎಂತಹ ಅದ್ಭುತಮಹಿಮನು ನೀನು ! (ಹೋಗುವನು)

## ಪ್ರವೇಶ 5

[ವಸಿಷ್ಠಾಶ್ರಮದಲ್ಲಿ]

(ತ್ರಿಮೂರ್ತಿಗಳು ಅವರ ಪತ್ನಿಯರು, ಆಯು—ಇಂದುಮತಿ, ವಸಿಷ್ಠ—ಅರುಂಧತಿ, ನಾರದ, ಅಶೋಕಸುಂದರಿ, ಇನ್ನೂ ಕೆಲವು ಋಷಿಜನರು ಇರುವರು.)

ನಾರದ—ಈ ವಿಧವಾದ ಸಂತೋಷಸಮಾರಂಭವು ಎಲ್ಲಿತಾನೇ ಉಂಟು ! ಅಗ್ರಜ—ವಸಿಷ್ಠ ?

ವಸಿಷ್ಠ—ನಾರದ, ಈ ಆನಂದಪ್ರದವಾದ ಉತ್ಸವಕ್ಕೆ, ಕಾರಣಕರ್ತನು ನೀನು, ಇದು ನಿನ್ನ ಲೀಲೆ—ನಾರದನಲೀಲೆ, ಆಂದಮೇಲೆ ವಿಚಿತ್ರವನ್ನು ಕೇಳಬೇಕೆ ?

ಬ್ರಹ್ಮ—ನನ್ನ ಮುಮ್ಮಗನಾದ ನಹುಷನು ಇನ್ನೂ ಬರಲಿಲ್ಲವೇಕೆ ?

ವಿಷ್ಣು—ನನ್ನ ಪುತ್ರನಾದ ನಹುಷನು ಬರದಿರಲು ಕಾರಣವೇನು ?

ಈಶ್ವರ—ಅಳಿಯನಾದ ನಹುಷನು ಇಷ್ಟುಕಾಲವಾದರೂ ಏತಕ್ಕೆ ಬರದೆ ನಿಂತಿರುವನು ?

ಅಶೋ—ನನ್ನ ನಾಥನು ಇನ್ನೂ ಆ ನೀಚ ದುಂಡನನ್ನು ಸಂಹರಿಸಿಲ್ಲವೋ ಹೇಗೋ.

ಅರುಂಧತಿ—ನಮ್ಮ ಕುಮಾರನು ವಿಜಯಿಯಾಗಿ ಇನ್ನೇನು ಇಷ್ಟರಲ್ಲೇ ಬರುವನು.

ಆಯು—ಪುತ್ರನು ಜನಿಸುವದಾದರೆ, ಇಂತಹ ತೇಜಸ್ವಿಯೂ ಯಶಸ್ವಿಯೂ ಆದ ಪುತ್ರನೇ ಜನಿಸಬೇಕು ; ಅಲ್ಪರಾದ ನಮ್ಮನ್ನು ಈ ತ್ರಿಮೂರ್ತಿಗಳ ಪಂಕ್ತಿಯಲ್ಲಿ ಸೇರಿಸಿ, ಅವರಿಗೆ ಸಮಾನರಾಗಿ ಆನಂದಿಸುವ ಭಾಗ್ಯವನ್ನು, ನಮಗೆ ಉಂಟುಮಾಡಿದ ಆ ನಹುಷನು, ನಮ್ಮ ಚಂದ್ರಕುಲವನ್ನೆ ಉದ್ಧಾರ ಮಾಡಿದನು.

ಇಂದುಮತಿ—ನಾನು ಇದುವರೆಗೆ ಆ ಪುತ್ರನಿಗಾಗಿ ವಹಿಸಿದ ವ್ಯಥೆಯೆಲ್ಲವೂ, ಇಲ್ಲಿ ಸೇರಿರುವ ಮಂಗಳಮೂರ್ತಿಗಳನ್ನು ಸಂದರ್ಶಿಸಿದ ಕೂಡಲೆ, ಮಾಯವಾಗಿ, ನಾನು ಆನಂದಾಬ್ಧಿಯಲ್ಲಿ ಮುಳುಗಿಹೋಗಿರುವೆನು.

ವಸಿಷ್ಠ—ಆ ನೀಚ ದುಂಡನನ್ನು ನಮ್ಮ ಕುಮಾರನು ಸಂಹರಿಸಿರಬಹುದು ? ಏತಕ್ಕೆಂದರೆ ನಾನು ಅವನಿಗೆ ಅಸ್ತ್ರಶಸ್ತ್ರಗಳ ಪ್ರಯೋಗೋಪಸಂಹಾರಗಳನ್ನು ಬಹು ಅದ್ಭುತವೂ ಚಮತ್ಕಾರವೂ ಆದ ರೀತಿಯಲ್ಲಿ ಉಪದೇಶಿಸಿರುವೆನು. ಈ ವಸಿಷ್ಠನಿಂದ ಶಿಕ್ಷಿತನಾದ ಮೇಲೆ, ನಹುಷನು ಪರಾಜಿತನಾಗುವದೂ ಉಂಟೋ ?

ಬ್ರಹ್ಮ—ನನ್ನ ಬ್ರಹ್ಮಾಸ್ತ್ರವನ್ನೇ ನಹುಷನು ಪಡೆದಿರುವಾಗ ಜಯವು ಸಿದ್ಧವೇ.

ವಿಷ್ಣು—ಒಂದುವೇಳೆ ಬ್ರಹ್ಮಾಸ್ತ್ರವು ವಿಫಲವಾದರೂ, ನನ್ನ ಚಕ್ರವನ್ನು ಕೈಲಿ ಧರಿಸಿದಮೇಲೆ ಕೇಳಬೇಕೆ ?

ಈಶ್ವರ—ಬ್ರಹ್ಮಾಸ್ತ್ರ, ಚಕ್ರಗಳಿಗೆ ಮೀರಿಬಂದರೆ, ಆ ನನ್ನ ತ್ರಿಶೂಲವನ್ನು ಅವನು ಉಪಯೋಗಿಸುವಾಗ, ವೈರಿಯನ್ನು ಗೆಲ್ಲದೆ ಬರುವ ಪಾಪವಾದರೂ ಉಂಟೋ?

ಸರಸ್ವತಿ—ಬ್ರಹ್ಮನನ್ನು ಆಶ್ರಯಿಸಿದವರು ಸರ್ವದಾ ವಿಜಯವನ್ನು ಹೊಂದುವರಲ್ಲವೆ?

ಲಕ್ಷ್ಮೀ—ವಿಷ್ಣುಭಕ್ತರಿಗೆ ಸರ್ವದಾ ಮಂಗಳವೇ.

ಪಾರ್ವತಿ—ಶಿವಭಕ್ತರಿಗೆ ಅಸಾಧ್ಯವಾದ ಕಾರ್ಯವೂ ಇದೆಯೆ ?

ನಾರದ—ಏತಕ್ಕೆ ಹೀಗೆ ಆತ್ಮಸ್ತುತಿಯಿಂದ ಅಹಂಕಾರಪಡುವಿರಿ ? ಶಾಂತರಾಗಿ, ನಹುಷನು ಬಂದರೆ, ಏನೆಂದು ವ್ಯಕ್ತವಾಗುವದು ; ಬ್ರಹ್ಮೋಪಾಸಕರೇ ಹೆಚ್ಚೋ, ವಿಷ್ಣುಭಕ್ತರೇ ಹೆಚ್ಚೋ, ಶಿವಭಕ್ತರೇ ಅಧಿಕರೋ, ಸರಸ್ವತಿ ಅಭಿಮಾನವನ್ನು ಪಡೆದವರೇ ಮೇಲೋ, ಲಕ್ಷ್ಮೀಕಟಾಕ್ಷಕ್ಕೆ ಪಾತ್ರರಾದವರೇ ದೊಡ್ಡವರೋ, ಅಥವಾ ಗೌರೀ ಅನುಗ್ರಹಕ್ಕೆ ಪಾತ್ರರಾದವರೇ ಮೀರಿದವರೋ—ಯಾವದಿದ್ದರೂ ಕಂಡುಬರುವದು.

ಸರಸ್ವತಿ—ಉಂಟೇ—ಉಂಟೇ—ಬ್ರಹ್ಮ ಸರಸ್ವತಿಗಳನ್ನು ನಂಬಿದವರು ಹೆಚ್ಚಾಗುವರೇ, ಈ ತ್ರಿಲೋಕಸಂಚಾರಿಗಳಾದ ನಾರದರನ್ನು ಭಜಿಸಿದವರೇ ಮೇಲಾಗುವರು ; ನಾರದಮಂತ್ರವನ್ನು ಜಪಿಸುವವರೇ ದೊಡ್ಡವರು, ಆಹಾಹಾ—ಹಾ—ಎಲಾ ನಾರದ—!

ಲಕ್ಷ್ಮೀ—ವಿಷ್ಣುಲಕ್ಷ್ಮಿಯರ ಪ್ರೀತಿಗೆ ಸಿಕ್ಕಿದವರು ದೊಡ್ಡವರಾಗುವದುಂಟೆ ; ಈ ತಂಬೂರಿದಾಸನನ್ನು ಭಕ್ತಿಯಿಂದ ಆರಾಧಿಸುವವರೇ ಅಭಿವೃದ್ಧಿಹೊಂದುವರು, ಹೀಗೆಂದು ಹೇಳಿದರೆ ನಾರದರಿಗೆ ಬಹು ಸಂತೋಷ ! ಅಲ್ಲವೇ ನಾರದ ?

ಗೌರಿ—ಅಡ್ಡಿಯೇನು, ಗೌರೀಶಂಕರರನ್ನು ನಂಬಿದವರು ದೊಡ್ಡವರಾಗುವದುಂಟೆ ? ಈ ತಂಬೂರಿ ಬಡದಾಸರನ್ನು ಭಕ್ತಿಯಿಂದ ಆರಾಧಿಸುವವರೇ ಅಭಿವೃದ್ಧಿ ಹೊಂದುವರು, ಹೀಗೆಂದು ಹೇಳಿದರೆ ನಾರದರಿಗೆ ಬಹು ಸಂತೋಷ, ಅಲ್ಲವೆ ನಾರದರೇ—?

ವಸಿಷ್ಠ—ಮಹಾತೇಜಸ್ವಿಯಾದ, ಬ್ರಾಹ್ಮಣಶ್ರೇಷ್ಠನಾದ, ಈ ನಾರದನ ಮಹಿಮೆಯನ್ನು, ಬಲ್ಲವರೇ ಬಲ್ಲರು ! ಇವನಲ್ಲಿ ಭಕ್ತಿಯಿಲ್ಲದವರಿಗೆ, ಈ ಬ್ರಾಹ್ಮಣನ ಮಹಿಮೆಯು ಹೇಗೆ ತಿಳಿದೀತು ?

ನಾರದ—ನೀನು ಸುಮ್ಮನಿರು ಅಣ್ಣ, ಬೇಕಾದಂತೆ ಆಡುತ್ತಿರಲಿ. ನಹುಷನು ಬಂದರೆ, ಆಮೇಲೆ ಎಲ್ಲವೂ ತಾನೇತಾನಾಗಿ ಹೊರಕ್ಕೆ ಬೀಳುವದು.

ಅರುಂಧತಿ—ಅಗೋ ! ನಮ್ಮ ಕಂದನು ಬಂದೇಬಂದನು !!

ಆಯು—ಆಹಾ, ಈ ಮಂಗಳರೂಪನಾದ ಮಗನನ್ನು ಸಂದರ್ಶಿಸಿದ ನಾನೇ ಧನ್ಯನು !

ಇಂದು—ನನ್ನ ಆನಂದವನ್ನು ನಾನು ವರ್ಣಿಸಲಾರೆನು !

ನಹುಷ—ಇಗೋ, ಇಲ್ಲಿರುವವರಿಗೆಲ್ಲಾ ನಹುಷನು ಭಕ್ತಿಪೂರ್ವಕವಾಗಿ ನಮಸ್ಕರಿಸುವನು.

ಎಲ್ಲರೂ—ದೀರ್ಘಾಯುವಾಗು ! ವಿಜಯಿಯಾಗು ! ಮಂಗಳವನ್ನು ಪಡೆ !

ನಾರದ—ನಹುಷ—ದುಂಡನನ್ನು ಸಂಹರಿಸಿದೆಯಾ ?

ನಹುಷ—ಅದ್ಭುತಮಹಿಮರಾದ ತಮ್ಮ ಅನುಗ್ರಹವಿದ್ದಮೇಲೆ, ದುಂಡನೇ ಅಲ್ಲ, ಅಂತಹ ಕೋಟಿದುಂಡರಾದರೂ ಲಕ್ಷ್ಯವೇ ; ಮಹಾನುಭಾವ, ನೀನು ಲೋಕಮಾನ್ಯನು, ಬ್ರಹ್ಮಾಂಡಕ್ಕೆ ತಿಲಕಪ್ರಾಯನು, ಮಹಾತ್ಮನು, ನಿನ್ನನ್ನು ಹಿಂಬಾಲಿಸಿದವರು ಹಿಮ್ಮೆಟ್ಟುವದೂ ಉಂಟೋ ?

ನಾರದ—ಎಲ್ಲೀ ! ನನ್ನ ತಂಬೂರಿಯನ್ನು ತಂದೆಯೋ, ಮರೆತು ಬಂದೆಯೋ ಮೊದಲು ಹೇಳು ?

ನಹುಷ—ನನಗೆ ಜೀವದಾನಮಾಡಿ, ವೈರಿವಿಜಯವನ್ನುಂಟುಮಾಡಿದ, ಈ ತಂಬೂರಿಯನ್ನು ಮರೆಯುವಷ್ಟು ಮಾತೃದ್ರೋಹಿಯೇ ನಾನು ? ಇಗೋ—ಸ್ವೀಕರಿಸಬೇಕು.

ವಸಿಷ್ಠ—ಏನು ಅಲ್ಲಿ ನಡೆದ ವಿದ್ಯಮಾನ ? ಬಾಲಕ ನಹುಷ—

ನಹುಷ—ಆ ದುಂಡನೊಡನೆ ನನಗೆ ಘೋರವಾದ ಯುದ್ಧವೇ ಆಯಿತು—ತಂದೆ—

ಸರಸ್ವತಿ—ಮೊದಲೇ ಬ್ರಹ್ಮಾಸ್ತ್ರದಲ್ಲಿ ಬಂಧಿಸಿದ್ದರೆ, ಅವನ ಗರ್ವವೇ ನಿರ್ಮೂಲವಾಗುತ್ತಿತ್ತು, ಕುಮಾರಾ—

ನಾರದ—ನಡೆದದ್ದನ್ನು ಸ್ಪಷ್ಟವಾಗಿ ವಿವರಿಸು, ಪಾಪ—ಇವರೆಲ್ಲರೂ ಕೇಳಲಿ.

ನಹುಷ—ನಾನೂ ಆದಿಯಲ್ಲಿ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದೆನು.

ಬ್ರಹ್ಮ—ಅಂದಮೇಲೆ ಚಕ್ರವನ್ನೂ, ತ್ರಿಶೂಲವನ್ನೂ, ಉಪಯೋಗಿಸುವ ಸಂಭವವೇ ಬರಲಿಲ್ಲವೆನ್ನು.

ನಹುಷ—ಆ ದುಂಡನು ಬ್ರಹ್ಮಾಸ್ತ್ರವನ್ನು ಸುಲಭವಾಗಿ ಮುರಿದು ಬಿಸಾಡಿದನು. ಲಕ್ಷ್ಯವೇ ಮಾಡಲಿಲ್ಲ. ನನಗೆ ಅತಿಯಾಗಿ ಲಜ್ಜೆಯಾಯಿತು.

ಲಕ್ಷ್ಮೀ—ಬ್ರಹ್ಮಾಸ್ತ್ರವೊಂದನ್ನೆ ನಂಬಿ ಹೋಗಿದ್ದರೆ ಏನುಗತಿ !! ನಮ್ಮ ಚಕ್ರವನ್ನು ಪ್ರಯೋಗಿಸಿದೆಯೋ ಇಲ್ಲವೋ ? ನಹುಷ—ಛೇದಿಸಿಯೇ ಇದ್ದೀತು, ದುಂಡನ ಶಿರಸ್ಸನ್ನು, ಇಲ್ಲವೇ ?

ನಹುಷ—ಅಹುದು—ಚಕ್ರವನ್ನು ಪ್ರಯೋಗಿಸಿದೆನು ;

ವಿಷ್ಣು—ಚಕ್ರವನ್ನು ಪ್ರಯೋಗಿಸಿದ ಮೇಲೆ ಕೇಳುವದೇನಿದೆ ? ಘೋರ ದೈತ್ಯರಿಗೆಲ್ಲಾ ಕಾಲಮೃತ್ಯುವೇ ಅಲ್ಲವೆ ನನ್ನ ಚಕ್ರ ?

ನಹುಷ—ಅಹುದು, ನಾನೂ ಹಾಗೆಂದು ತಿಳಿದೇ ಚಕ್ರವನ್ನು ಪ್ರಯೋಗಿಸಿದೆನು. ಆದರೆ ಅದನ್ನು ಆಟದ ಬುಗರಿಯಂತೆ ಕೈಲಿ ಹಿಡಿದು, ಆ ದುಂಡನು ಗಿರ ಗಿರನೆ ತಿರುಗಿಸುತ್ತಾ, ನನ್ನನ್ನು ಬಹುವಾಗಿ ಹಾಸ್ಯಮಾಡಿದನು. ಆಗ ನನಗೆ ಸಹಿಸಲಾರದ ಅವಮಾನವಾಯಿತು.

ಗೌರಿ—ಈ ಬ್ರಹ್ಮಾಸ್ತ್ರಕ್ಕೂ, ಆ ಚಕ್ರಕ್ಕೂ, ಸ್ವಾಧೀನವಾಗುವಂತಹ, ಅಲ್ಪಬಲನೇನು ಆ ದುಂಡನು ? ಅವನು ಮಹಾ ಪ್ರಚಂಡನು, ಅವನನ್ನು ಬಗ್ಗಿಸುವದಕ್ಕೆ, ನಮ್ಮ ತ್ರಿಶೂಲವೊಂದೇ, ಸಾರವಾದ ಆಯುಧ.

ನಹುಷ—ನಾನೂ ಆ ತ್ರಿಶೂಲದಿಂದ ಅವನನ್ನು ಬಲವಾಗಿ ಚುಚ್ಚಿದೆನು.

ಈಶ್ವರ—ಅಹುದು—ಹಾಗೆಯೇ ಮಾಡಬೇಕು, ತಕ್ಷಣವೇ ಗತಪ್ರಾಣನಾಗಿ ಭೂಮಿಗೆ ಬಿದ್ದನಷ್ಟೆ—ಆ ನೀಚನು ?

ನಹುಷ—ನಿಶ್ಚಯವಾಗಿಯೂ ನಾನು ಹಾಗೆಂದು ತಿಳಿದೇ ಚುಚ್ಚಿದೆನು ; ಆದರೆ ಆ ತ್ರಿಶೂಲವನ್ನು ಕೈಲಿ ಹಿಡಿದು ಮುರಿದು ಪುಡಿಪುಡಿಮಾಡಿ ಎಸೆದುಬಿಟ್ಟನು ; ನಿರ್ಲಕ್ಷ್ಯದಿಂದ—

ಆಯು—ಆಹಾಹಾ ! ಆ ನೀಚನು ಇನ್ನೆಂತಹ ಸಾಹಸಿ ! ಬ್ರಹ್ಮಾಸ್ತ್ರಕ್ಕೂ ತಗ್ಗದೆ, ವಿಷ್ಣುಚಕ್ರಕ್ಕೂ ಬಗ್ಗದೆ, ತ್ರಿಶೂಲಕ್ಕೂ ಕುಗ್ಗದೆ, ಹೋದನಲ್ಲವೆ—ಅಬ್ಬಬ್ಬಾ—!!

ವಸಿಷ್ಠ—ನಾನು ಕೊಟ್ಟಿದ್ದ ದಿವ್ಯಾಸ್ತ್ರಗಳಿಂದಲೇ ಅವನು ಸತ್ತಿರಬಹುದು, ಅಲ್ಲವೆ ನಹುಷ ?

ನಹುಷ—ಬ್ರಹ್ಮನ ಬ್ರಹ್ಮಾಸ್ತ್ರವೇ ಫಲಿಸಲಿಲ್ಲ, ವಿಷ್ಣುವಿನ ಚಕ್ರವೇ ಮುಗ್ಗರಿಸಿತು, ಶಂಕರನ ತ್ರಿಶೂಲವೇ ವಿಫಲವಾಯಿತು ; ಅಂದಮೇಲೆ ನಿಮ್ಮ ಅಸ್ತ್ರಶಸ್ತ್ರಗಳನ್ನು ಉಪಯೋಗಿಸಿ ಏತಕ್ಕೆ ಅವಕ್ಕೆ ಅವಮಾನವನ್ನು ತರಲಿ ಎಂದು, ನಾನು ಅವುಗಳ ಕಂತೆಯನ್ನು ಬಿಚ್ಚಲೇ ಇಲ್ಲ, ತಂದೆ—

ಆಯು—ಆದರೆ ನೀನು ಆ ದುಷ್ಟನಾದ ದುಂಡನ ಬಾಧೆಯನ್ನು ಹೇಗೆ ತಪ್ಪಿಸಿ ಕೊಂಡು ಬಂದೆ, ಮಗು ?

ನಹುಷ—ಈ ಅಶೋಕಸುಂದರಿಯು, "ನನ್ನ ಪತಿವ್ರತಾಪ್ರಭಾವವೇ ಅವನನ್ನು ನಿರ್ವೀರ್ಯನನ್ನಾಗಿ ಮಾಡಬಲ್ಲದು, ನೀವು ನೆಪಮಾತ್ರಕ್ಕೆ ಅವನೊಡನೆ ಯುದ್ಧಕ್ಕೆ ನಿಂತರೂ ಸಾಕು" ಎಂದು ಹೇಳಿದ್ದಳು ; ಆ ಮಾತು ಜ್ಞಾಪಕಕ್ಕೆ ಬಂದು, ಅಶೋಕಸುಂದರಿಯು ನಿಜವಾದ ಪತಿವ್ರತೆಯೇ ಆದರೆ, ಆ ಪಾತಿವ್ರತ್ಯ ಬಲವಾದರೂ ದುಂಡನನ್ನು ಬಲರಹಿತನನ್ನಾಗಿ ಮಾಡಬಾರದೆ, ಎಂದುಕೊಂಡೆನು.

ಅರುಂಧ—ಏನಾಯಿತು—ಆಗ ?

ನಹುಷ—ಆಗುವದೇನು, ಅವನು ಇದ್ದಕ್ಕಿದ್ದಂತೆಯೇ ತೇಜೋಹೀನನಾಗಿ, ಬಲರಹಿತನಾಗಿ, ಮಂಕುಹಿಡಿದವನಂತೆ, ಸುಮ್ಮನೆ ನಿಂತುಕೊಂಡುಬಿಟ್ಟನು ; ಗರುಡ ಮಂತ್ರವನ್ನು ಜಪಿಸಿದಮೇಲೆ ಘಟಸರ್ಪವು ನಿಶ್ಚಲವಾಗಿ ನಿಲ್ಲುವಂತೆ.

ಇಂದು—ಆಹಾ ! ಎಂತಹ ಪ್ರತಾಪವಿದೆ ! ಪಾತಿವ್ರತ್ಯದಲ್ಲಿ !!

ಸರಸ್ವತಿ—ಪತಿವ್ರತಾಪ್ರಭಾವವು ಬ್ರಹ್ಮಾಸ್ತ್ರಕ್ಕೂ ಮೀರಿತಲ್ಲ !!

ಲಕ್ಷ್ಮೀ—ಪತಿಭಕ್ತಿಯು ವಿಷ್ಣುಚಕ್ರಕ್ಕೂ ಮೀರಿದ ಶಕ್ತಿಯುಳ್ಳದ್ದಾಯಿತಲ್ಲ ! ಆಶ್ಚರ್ಯ !!

ಗೌರಿ—ಶಿವಶಕ್ತಿಗೂ ಮೀರಿಹೋಯಿತೆ, ಸಾಧ್ವೀಮಣಿಯರ ಪತಿವ್ರತಾಪ್ರಭಾವ !!

ವಸಿಷ್ಠ—ಅಷ್ಟೇಯೇನು, ಪತಿವ್ರತೆಯು ತ್ರಿಮೂರ್ತಿಗಳಿಗೂ ಮೀರಿದವಳು, ಪತಿವ್ರತೆಯರ ಶಕ್ತಿಗೆ ಸಮಾನನಾವುದು ?

ನಾರದ—ಅನಸೂಯಾದೇವಿಯ ಮಹಿಮೆಯನ್ನು, ಪ್ರತ್ಯಕ್ಷವಾಗಿ ಪರಿಶೀಲಿಸಿ ಬಂದಿರುವ ಈ ತ್ರಿಮೂರ್ತಿಗಳಿಗೂ, ತ್ರಿಮೂರ್ತಿ ಪತ್ನಿಯರಿಗೂ, ನಾವು ವಿವರಿಸುವದೇನಿದೆ ? ಅಣ್ಣಾ—ಪತಿವ್ರತೆಯನ್ನು ಪರೀಕ್ಷಿಸಿ ಅವರೇ ತಿಳಿದುಕೊಂಡಿದಾರೆ. ಪಾತಿವ್ರತ್ಯಪ್ರಭಾವವೇನೆಂಬುವನ್ನು; ಅನುಭವವೇ ಇದೆ, ಇವರಿಗೆ.

ಬ್ರಹ್ಮ—ಛೀ—ನಾರದ—ಅವಳನ್ನು ಕೆಣಕಿ ಮಕ್ಕಳಾಗಿ ಬಿದ್ದಿದ್ದ, ನಮ್ಮನ್ನು ಹಂಗಿಸುವದೇತಕ್ಕೆ ? ನೀನೇನು ಕಾಣೆಯಾ ? ಪತಿವ್ರತಾಪ್ರಭಾವವನ್ನು ; ನೀನೂ ಬಲ್ಲೆಯಷ್ಟೆ !!

ವಿಷ್ಣು—ಸ್ತ್ರೀವೇಷವನ್ನು ಧರಿಸಿ, ಪತಿಯೊಡನೆ ಅನೇಕ ಕಾಲ ಸಂಸಾರಮಾಡಿದ ಈ ನಾರದನು ಕಾಣನೇ, ಪಾತಿವ್ರತ್ಯದಮಹಿಮೆಯನ್ನು ? ಅವನಿಗೆ ಅನುಭವವೇ ಉಂಟು. ಪತ್ನಿಯೇ ಆಗಿದ್ದನಷ್ಟೆ !!

ಈಶ್ವರ—ಅರವತ್ತು ಮಕ್ಕಳನ್ನು ಪ್ರಸವಿಸಿದ್ದು ಏನು ಸಾಮಾನ್ಯ ಕಷ್ಟವೇ ! ಇಷ್ಟು ಬೇಗ ಮರೆತುಹೋದೀತೆ ?

ವಸಿಷ್ಠ—ಬ್ರಹ್ಮಮಂತ್ರ, ವಿಷ್ಣುಮಂತ್ರ, ಶಿವಮಂತ್ರಗಳೊಂದಕ್ಕೂ ವಶನಾಗದ ಮೇಲೆ, ಆ ದುಂಡನು, ಸಂಹಾರವಾದುದು ಯಾವದರಿಂದ, ನಹುಷ ?

ನಾರದ—ಹೇಳು—ನಹುಷ—ಎಲ್ಲಕ್ಕೂ ಮೀರಿದ ಮಹಾಮಂತ್ರವು ಯಾವುದು ? ಆ ದುಂಡನನ್ನು ಸಂಹರಿಸಿದ ದಿವ್ಯಮಂತ್ರ ? ಇವರೆಲ್ಲಾ ಕೇಳಲಿ—ಪಾಪ—

ನಹುಷ—ಏನೆಂದು ಹೇಳಲಿ, ಹೇಳಿದರೆ ಇವರೆಲ್ಲರೂ ತಲೆಯನ್ನು ತಗ್ಗಿಸಿಕೊಳ್ಳ ಬೇಕಾಗುವದು !!

ಸರ್ವರೂ—ಇಲ್ಲಾ—ಇಲ್ಲಾ—ಹೇಳು, ನಾಚಿಕೆ ಏಕೆ ? ಕೇಳುವ.

ನಹುಷ—ಕಡೆಗೆ ಆಪತ್ಕಾಲದಲ್ಲಿ ಮಾನವನ್ನೂ ಪ್ರಾಣವನ್ನೂ ಉಳಿಸಿ, ವೈರಿಯನ್ನು ಗೆದ್ದು, ಲೋಕಕ್ಕೆ ಮಂಗಳವನ್ನುಂಟುಮಾಡಿದ್ದು, ಒಂದೇಒಂದು ಮಂತ್ರ, ಅದೇ ದಿವ್ಯವಾದ ಮಂತ್ರ, ಸಾರವಾದ ಮಂತ್ರ.

ವಸಿಷ್ಠ—ಅದಾವುದು ?

ನಹುಷ—ಅದೇ ಈ ಮಹಾನುಭಾವರಾದ ನಾರದರ ಮಂತ್ರ ; ನಾರದಮಂತ್ರದಿಂ ದಲೇ ನಾನು ಜೀವಿಸಿ ಬಂದದ್ದು.

ಆಯು—ಆ ನಾರದಮಂತ್ರವನ್ನು ಯಾವ ಅಸ್ತ್ರದಲ್ಲಿ ಪ್ರಯೋಗಿಸಿದೆ, ನಹುಷ ?

ನಹುಷ—ಇಗೊ, ಇದೆ—ಆ ದಿವ್ಯಾಸ್ತ್ರ, ವೈರಿಯನ್ನು ಸಂಹರಿಸಿದ ಅದ್ಭುತವಾದ ಅಸ್ತ್ರ !! (ತಂಬೂರಿಯನ್ನು ತೋರಿಸುವನು)

ಸರಸ್ವತಿ—ಏನು ! ಇದೇ ?

ಲಕ್ಷ್ಮೀ—ಇದೇಯೋ ದಿವ್ಯಾಸ್ತ್ರ ?

ಗೌರಿ—ಈ ತಂಬೂರಿಯೆ !! ಇದೇ ದಿವ್ಯಾಸ್ತ್ರವೇ ?

ಬ್ರಹ್ಮ—ನಾರದಮಂತ್ರವನ್ನು ಈ ತಂಬೂರಿಯಲ್ಲಿ ಸೇರಿಸಿದೆಯೋ ?

ವಿಷ್ಣು—ಸೇರಿಸಿ, ಈ ತಂಬೂರಿಯನ್ನು ದುಂಡನ ಶಿರಸ್ಸಿನಮೇಲೆ ಎತ್ತಿ ಹೊಡೆ ದೆಯೋ ?

ಈಶ್ವರ—ಅದರಿಂದ ಆ ದುಂಡನು ಮೃತನಾದನೋ !!

ನಹುಷ—ಸಂದೇಹವೇನು, ಮೃತನಾದುದೊಂದೇ ಅಲ್ಲ—

ನಾರದ—ನನ್ನ ತಂಬೂರಿಯ ಬುರುಡೆ ಏನಾದರೂ ಚೂರು ಚೂರಾಗಿ ಹೋಯಿ ತೇನಪ್ಪ ಪುಣ್ಯಾತ್ಮ ! ಈ ಅವಾಂತರದಲ್ಲಿ—

ನಹುಷ—ಇಲ್ಲಾ ದೇವ, ಚೂರು ಚೂರಾಗಿ ಹೋದದ್ದು, ತಮ್ಮ ತಂಬೂರಿಯ ಬುರುಡೆಯಲ್ಲ ;

ವಸಿಷ್ಠ—ಆ ನೀಚನಾದ ದುಂಡನ ತಲೆಯ ಬುರುಡೆ, ಅದೇ, ಚೂರು ಚೂರಾಗಿ ಹೋಗಿರಬೇಕು.

ಸರ್ವರೂ—ಆಶ್ಚರ್ಯ ! ಪರಮಾಶ್ಚರ್ಯ !! ಈ ನಾರದನ ಲೀಲೆ !!!

ನಾರದ—ಕಟಾಕ್ಷಿಸಬೇಕು, ಹೇಗಿದೆ—ನನ್ನ ಲೀಲೆ ? ಎಂಬುದನ್ನು. ಪತ್ನಿಯರಿಂದೊಡಗೂಡಿ, ನಿಮ್ಮ ನಿಮ್ಮ ನಿವಾಸದಲ್ಲಿ, ನೀವೂ ಲೀಲೆಯನ್ನು ಅನುಭವಿಸುವರಲ್ಲವೆ ; ಈಗ ನೋಡಿದಿರಾ, ಈ ತಂಬೂರಿಯ ದಾಸನ ಲೀಲೆ ; ಇದಿರಲಿ—ಆಗಲಿ ಮುಂದಿನ ಕಾರ್ಯ, ಏತಕ್ಕೆ ವ್ಯರ್ಥ ಕಾಲಹರಣ ?

ವಸಿಷ್ಠ—ಏನಾಗಬೇಕು, ಮುಂದೆ—ನಾರದ ?

ನಾರದ—ನಹುಷನೇ, ಬಾ ಹೀಗೆ ಬಾ, ಈ ಮಹಾತ್ಮರಿಗೆಲ್ಲಾ ನಮಸ್ಕರಿಸಿ, ಈ ದಿವ್ಯ ಪೀಠವನ್ನು ಅಲಂಕರಿಸು ; ನನಗಾಗಿ ಬಹು ಕಷ್ಟಪಟ್ಟಿರುವೆ ; ಒಂದು ರತ್ನವನ್ನು ಕೊಡುವೆನು.

ನಹುಷ—ಆಜ್ಞೆ. (ಬಂದು ನಿಲ್ಲುವನು)

ನಾರದ—ಅಶೋಕಸುಂದರೀ, ಸಾಧ್ವೀಮಣಿ—ಬಾ, ನೀನು ಬಂದು ಈತನ ಪಾರ್ಶ್ವದಲ್ಲಿ ನಿಲ್ಲು. ಎಲ್ಲಿ-ಬನ್ನಿ-ಯಾರು ? ಧಾರೆ ಎರೆದುಕೊಡುವವರು ? ಪಾರ್ವತೀದೇವೀ, ಶಂಕರ, ಬನ್ನಿ—ಹೀಗೆ ಬಂದುನಿಲ್ಲಿ ; ವಧುವಿನ ಸಮೀಪದಲ್ಲಿ.

ಸರಸ್ವತಿ—ಕಲ್ಪವೃಕ್ಷವನ್ನು ಕರೆಯಬೇಕಾಗಿತ್ತಲ್ಲವೆ, ನಾರದ ?

ಪಾರ್ವತಿ—ಶಾರದಾ, ನಿನ್ನ ಕುಚೇಷ್ಟೆಯನ್ನು ಈಗಲೂ ಬಿಡುವದಿಲ್ಲವೇ ?

ನಾರದ—ವರನ ಕಡೆಯವರು ಯಾರು ಬನ್ನಿ—ವರನ ಮಾತಾಪಿತೃಗಳು, ಬೇಗ ಬನ್ನಿ ; (ತನ್ನಲ್ಲಿ) ಈಗ ಬರಲಿ, ಯಾರಿಗೆ ಧೈರ್ಯವಿದೆ ನೋಡುವ, (ಪ್ರಕಾಶ) ಬನ್ನಿ ಮತ್ತೆ, ಬೇಗ ಬೇಗ, ಗಂಡಿನ ತಂದೆತಾಯಿಗಳು.

ವಿಷ್ಣು—ನನ್ನ ಅಂಶದಿಂದ ಜನಿಸಿದವನು ಈ ನಹುಷನು ; ಅಂದಮೇಲೆ ನನ್ನ ಕುಮಾರನೇ ಸರಿ ; ನಾನೂ ಲಕ್ಷ್ಮಿಯೂ ನಿಲ್ಲಬೇಕು ; ಆದರೂ ಈ ನಾರದನು ಏನು ಕುಚೇಷ್ಟೆಮಾಡಿ ಮಾನವನ್ನು ಕಳೆಯುವನೋ ಕಾಣೆನು ; ಇರಲಿ (ವಿಷ್ಣು-ಲಕ್ಷ್ಮಿ ಬಂದು ನಿಲ್ಲುವರು)

ಆಯು—ಇದೇನಿದು, ಹೀಗುಂಟೇ ! ನಾನೆಷ್ಟೋ ವ್ರತ, ದಾನ, ಧರ್ಮಗಳನ್ನು ಮಾಡಿ, ಬಹು ಪ್ರಯಾಸಪಟ್ಟು, ಕಡೆಗೆ ನಮ್ಮ ಕುಲಗುರುಗಳಾದ ದತ್ತಾತ್ರೇಯರ ಅನುಗ್ರಹದಿಂದ, ಸಂಪಾದಿಸಿದ ಪುತ್ರನು. ಈ ನಹುಷನು ; ಈ ಇಂದುಮತಿಯು ನವಮಾಸಗರ್ಭವನ್ನು ಧರಿಸಿ ಕಷ್ಟಪಟ್ಟು ಪ್ರಸವಿಸಿದ ಮಾತೆಯು ; ನ್ಯಾಯವಾಗಿ ನಾವಿಬ್ಬರೂ ನಿಲ್ಲಬೇಕು. (ನಿಲ್ಲುವರು)

ವಸಿಷ್ಠ—ಸಾರ್ಥಕವಾಗಿದೆ, ಈ ವಿಚಿತ್ರ ! ಅಂಶಮಾತ್ರದಿಂದ ಸೃಜಿಸಿದ್ದಕ್ಕೇ, ಈ ವಿಷ್ಣುವು ಜನಕನಾಗಿ ಬಿಡುವುದೂ ಇಲ್ಲ ; ಪ್ರಸವಿಸಿದ ಮಾತ್ರಕ್ಕೆ, ಈ ಆಯು ಇಂದುಮತಿಯರು ಮಾತಾಪಿತೃಗಳಾಗಿ ಬಿಡುವುದೂ ಇಲ್ಲ ; ಎಳೆಯು

ಶಿಶುವನ್ನು ಈ ಅರಣ್ಯದಲ್ಲಿ ಕಟ್ಟಿಕೊಂಡು, ಬಹು ಪ್ರಯಾಸಪಟ್ಟು ಸಲಹಿ, ದೊಡ್ಡವನನ್ನಾಗಿ ಮಾಡಿ, ವಿದ್ಯಾಭ್ಯಾಸಮಾಡಿಸಿದ ನಾನೇ, ನಿಜವಾದ ಜನಕನು ? ಈ ಅರುಂಧತಿಯೇ ಇವನ ಜನನೀ ; ಆದ್ದರಿಂದ ನಾವೇ ನಿಲ್ಲತಕ್ಕವರು. (ನಿಲ್ಲುವರು)

ಬ್ರಹ್ಮ—ಇದೇನು ಈ ವಿಚಿತ್ರ ನಾರದ ! ಒಬ್ಬ ಮಗನಿಗೆ ಎಷ್ಟು ಜನರಯ್ಯ, ಮಾತಾ ಪಿತೃಗಳು !

ಸರಸ್ವತಿ—ನ್ಯಾಯವಾಗಿ ಜನಿಸುವ ಶಿಶುಗಳಿಗಾದರೆ, ಲೋಕರೂಢಿಯಂತೆ ಒಬ್ಬನು ತಂದೆ, ಒಬ್ಬಳು ತಾಯಿ ; ಇವನಿಗೇನು ಈ ನಹುಷನಿಗೆ ; ಮೊದಲೇ ದೇವಾಂಗನೆಯಾದ ಊರ್ವಶಿಯ ಸಂತತಿಯವನು ! ಅವಳೋ, ಆ ಇಂದ್ರನ ವಾರಾಂಗನೆ, ಅಂದಮೇಲೆ ಕೇಳುವದೇನು ? ಆಗಲಿ-ನಾರದ, ನೀನು ತಾನೇ ಏತಕ್ಕೆ ಸುಮ್ಮನಿರುವೆ ? ನಿನ್ನ ಲೀಲೆಯಿಂದ ಸಂಭವಿಸಿದವನು ತಾನೇ ಈ ನಹುಷನು ? ಇವನ ಅವತಾರಕ್ಕೆ ಮೂಲಕಾರಣನು ನೀನೇ ; ಆದ್ದರಿಂದ ನೀನೂ ಒಬ್ಬ ತಂದೆಯೇ, ಬಾ ಹೀಗೆ ಬಾ, ಬಂದು ನಿಲ್ಲು. ಇವರ ಜೊತೆ ಯಲ್ಲಿ ನೀನೂ—

ಬ್ರಹ್ಮ—ನ್ಯಾಯವಾಗಿ ಹೇಳಿದೆ, ಶಾರದ. ಇವನೇನೋ ತಾನೇ ಬಂದು ನಿಂತು ಬಿಡುತ್ತಿದ್ದನು ; ಆದರೆ '' ಪತ್ನಿಯಿಲ್ಲದೆ ನಾನೋರ್ವನೇ-ಹೇಗೆ ನಿಲ್ಲಲಿ, ಇವರೆ ಲ್ಲರೂ ಜೋಡಿಯಾಗಿರುವಾಗ, ನಾನೊಬ್ಬನೇ ಒಂಟಿಯಾಗುವೆನಲ್ಲಾ '' ಎಂದು ಅನುಮಾನಿಸುತ್ತಿರುವನು.

ಸರಸ್ವತಿ—ಇವನಿಗೇನು ? ಇವನ ತಂಬೂರಿಯೇ ಇದೆಯಲ್ಲಾ ಪತ್ನಿಗೆ ಪ್ರತಿಯಾಗಿ ಪ್ರೇಮಾಸ್ಪದವಾದ ವಸ್ತು. ಬಾ ನಾರದ, ಬಾ ಸಂದೇಹವೇತಕ್ಕೆ ?

ನಾರದ—ನಹುಷ—ಎಂತಹ ವಿಚಿತ್ರ ಪುತ್ರನಯ್ಯ ನೀನು ! ನಿನ್ನ ಅದೃಷ್ಟವೇನೆಂದು ಹೇಳಲೀ, ಎಷ್ಟು ಜನರಪ್ಪಾ ನಿನಗೆ ಅಪ್ಪಂದಿರು ! ಎಲ್ಲರೂ, ನನ್ನಿಂದ ಜನಿ ಸಿದವನು, ನನ್ನಿಂದ ಜನಿಸಿದವನು, ತನ್ನಿಂದ ಜನಿಸಿದವನು, ಇವನು ನನ್ನ ಪುತ್ರನು, ನನಗೆ ಆದವನು, ಹೀಗೆ-ಹಾಗೆ ಎಂದು, ನೀನೊಬ್ಬ ಪುತ್ರನಿಗೆ ನೂರಾರು ಜನಜನಕರು ಬಾಧ್ಯರಾಗಿ ಬಂದು ನಿಂತಿರುವರಲ್ಲ !! ಓರ್ವ ಪುತ್ರನಿಗೆ ಓರ್ವನೇ ಜನಕನೆನ್ನಿಸಿಕೊಳ್ಳುವದೇ ಎಷ್ಟೋ ಪ್ರಯಾಸಕಾರ್ಯವಾಗಿ ರುವಾಗ, ಇನ್ನು ನೂರಾರು ಜನಜನಕಂದಿರು ನನಗೆ ಎಂದು ಹೇಳಿಕೊಳ್ಳು ವದಕ್ಕೆ ಶಕ್ತನಾದ ನಿನ್ನ ಅದೃಷ್ಟವೇ ಅದೃಷ್ಟ ! ಈಗ ಯಾರು ನಿಜವಾದ ಮಾತಾಪಿತೃಗಳು ನೀನೇ ಹೇಳು ? ಅಥವಾ ಇವರೆಲ್ಲರೂ ನಿನ್ನ ಜನಕರೇ ಅಹುದೋ ? ಇದ್ದರೆ ಅದನ್ನೂ ಹೇಳು, ಮುಂದಿನ ಕಾರ್ಯ ನಡೆಯಲಿ.

ನಹುಷ—ಈ ಅಂಶವನ್ನು ಬಾಲಕನಾದ ನಾನು ಹೇಗೆ ನಿರ್ಧರಿಸಲಿ ? ಹಿರಿಯರು ನಿರ್ಧರಿಸಬೇಕು, ನನ್ನ ಜನಕನು ಇವನೇ ಎಂದು ಯಾವ ಬಾಲಕನು ತಾನೇ ಧೈರ್ಯವಾಗಿ ಹೇಳಬಲ್ಲನು ? ಹಿರಿಯರಾದವರು ಈತನು ನಿಮ್ಮ ಜನಕನು,

ಈಕೆಯು ನಿಮ್ಮ ಜನನಿಯು, ಎಂದು ಹೇಳಿಕೊಟ್ಟಮೇಲೆಯೇ, ಮಕ್ಕಳಾದವರು ಮಾತಾಪಿತೃಗಳನ್ನು ತಿಳಿದುಕೊಳ್ಳುವರು.

ನಾರದ—ನ್ಯಾಯ—ನೀನು ಹೇಳುವದು, ತನ್ನ ಮಾತಾಪಿತೃಗಳನ್ನು ಹಿರಿಯರು ತೋರಿಸಿದಲ್ಲದೆ ಜನಿಸಿದ ಯಾವ ಮಕ್ಕಳೂ ತಾವೇ ತಿಳಿಯಲಾರರು. ಆದರೆ ಈಗ ನಿನಗೆ ಹಿರಿಯರು ಯಾರು ಹೇಳಬೇಕೆನ್ನುವಿ ? ನಾನು ನಿನಗೆ ಹಿರಿಯನಲ್ಲವೆ ? ನಾನೇ ಹೇಳಲಿ ನಿಮ್ಮ ಜನನೀಜನಕರಾರೆಂಬುದನ್ನು ?

ನಹುಷ-ತಾವೇನೋ ನನಗೆ ಹಿರಿಯರೇ, ಆದರೆ ತಮಗೂ ಹಿರಿಯರಿರುವರಲ್ಲಾ-ಇಲ್ಲೀ.

ನಾರದ—ನನಗೆ ಹಿರಿಯನು ವಸಿಷ್ಠನು, ಅವನು ಹೇಳಿದರೆ ಆಗಬಹುದೊ ?

ನಹುಷ—ಅವರ ಜನಕನೂ ಓರ್ವನಿರುವನಲ್ಲವೆ, ಆತನಿಗೂ ಹಿರಿಯ ?

ನಾರದ—ವಸಿಷ್ಠರ ಜನಕನು ಯಾರು, ಬ್ರಹ್ಮದೇವನೇ—ಅವರು ಹೇಳಬಹುದೇನು ?

ನಹುಷ—ಅವರ ಜನಕನೂ ಓರ್ವ ನಿರುವನಲ್ಲವೆ, ಆತನಿಗೂ ಹಿರಿಯ ?

ನಾರದ—ಓಹೋ ಬ್ರಹ್ಮನ ಜನಕನು ವಿಷ್ಣುವು ; ಆತನು ಹೇಳಿದರೆ ಆಗಬಹುದೋ ?

ನಹುಷ-ಆತನಿಗೂ ದೊಡ್ಡವರಿದಾರೆ ನಮ್ಮ ವಂಶದಲ್ಲಿ; ಆ ವಿಷ್ಣುವೇನು-ನಾನೇನು?

ನಾರದ—ಅವರಾರು ಹೇಳು ? ಅವರನ್ನೇ ಬರಮಾಡುವ.

ನಹುಷ—ನಮ್ಮ ವಂಶವು ವಾರಾಂಗನೆಯ ವಂಶವೆಂದು ಈ ಶಾರದಾದೇವಿಯರು ಮೊದಲೇ ಸೂಚಿಸಿರುವರಷ್ಟೆ.

ನಾರದ—ಯುಕ್ತ, ನಿಮ್ಮ ಜನಕನು ಆಯು ; ಆಯುವಿನ ಜನನಿ—ಆ ಊರ್ವಶಿ ; ನಿಮ್ಮ ಅಜ್ಜಿ—ನಿಮ್ಮ ತಂದೆಯೆಂದು ಹೇಳಿಕೊಳ್ಳುವ ಈ ವಿಷ್ಣುವು, ನಿನಗೆ ಅಜ್ಜಿಯಾಗುವ ಊರ್ವಶಿಗಿಂತಲೂ, ಹೇಗೆತಾನೇ ಹಿರಿಯನಾದಾನು ! ಆಗಲಿ ಹೀಗೆಯೇ ನಿಂತಿರಿ, ಈ ನಿಮಿಷದಲ್ಲೇ ಆ ಊರ್ವಶಿಯನ್ನು ಬರಮಾಡುವೆನು. (ಹೋಗುವನು)

ಲಕ್ಷ್ಮೀ—ಎಂತಹ ಕಾರ್ಯವನ್ನು ಮಾಡಿದನು, ಈ ನಾರದನು ! ನನ್ನ ಪತಿಯಾದ ವಿಷ್ಣುವನ್ನೆ ನನ್ನ ಪುತ್ರನನ್ನಾಗಿ ಮಾಡಿದನು।

ಬ್ರಹ್ಮ—ನಮ್ಮ ಜನಕನನ್ನೇ ನಮ್ಮ ಮೊಮ್ಮಗನನ್ನಾಗಿ ಮಾಡಿದನು !

ವಸಿಷ್ಠ—ನಮ್ಮ ತಾತನನ್ನೆ ನನ್ನ ಸುತನನ್ನಾಗಿ ಮಾಡಿದನು !

ಗೌರಿ—ನಮ್ಮ ಅಗ್ರಜನನ್ನೆ ನಮ್ಮ ಜಾಮಾತನನ್ನಾಗಿ ಮಾಡಿದನು !

ಈಶ್ವರ—ನನ್ನ ಭಾವಮೈದನೇ ಅಳಿಯನಾದನು !

ಆಯು—ನಮ್ಮ ಜನನಿಯು ಊರ್ವಶಿ ; ಆಕೆಯ ಜನಕನು ಈ ವಿಷ್ಣುವು, ನಮ್ಮ ಅಜ್ಜನು—ಆ ಅಜ್ಜನಾದ ವಿಷ್ಣುವನ್ನು, ನನಗೆ ಪುತ್ರನನ್ನಾಗಿಯೂ, ನಮ್ಮ ತಾಯಿ ಊರ್ವಶಿಗೆ ಮೊಮ್ಮಗನನ್ನಾಗಿಯೂ, ಮಾಡಿದನು !

ಇಂದು—ಎಷ್ಟು ಚಮತ್ಕಾರ ! ಈ ನಾರದರದು !

ಅರುಂ—ಏನು ವಿಚಿತ್ರವ್ಯಾಪಾರ, ಈ ನಾರದರದು !!

ನಾರದ—(ಬಂದು) ಅಮ್ಮಾ-ಊರ್ವಶೀ-ಇಗೋ, ಇಲ್ಲಿರುವವರಾರು ನೋಡು, ನಡೆದಿರುವ ವಿದ್ಯಮಾನವನ್ನೆಲ್ಲಾ ನಿನಗೆ ಹೇಳಿರುವೆನಷ್ಟೆ ; ಈ ನ್ಯಾಯ್ಯವನ್ನು ಹೇಗೆ ತೀರ್ಮಾನಿಸುವೆಯೋ ನೋಡು ; ನಾರದನೇನೋ ನಾನು ಕಲಹ ಪ್ರಿಯನೇ ಆದೆನಲ್ಲ ; ಸಧ್ಯಕ್ಕೆ ಮುಂದಿನ ಕಾರ್ಯವು ನಿರ್ವಿಘ್ನವಾಗಿ ನಡೆಯಲಿ. ಮಹಾ ಮಾತೆ ; ಊರ್ವಶೀ—

ಊರ್ವಶಿ—ಎಲ್ಲರೂ ಪ್ರಾಜ್ಞಶಿಖಾಮಣಿಗಳೇ ಆಗಿರುವಾಗ, ವಾರಾಂಗನೆಯರೆಂಬ ದೂಷ್ಯವಾದ ಕುಲಕ್ಕೆ ಸೇರಿರುವ ನಾನು ಮಾಡುವ ತೀರ್ಮಾನವನ್ನು, ಈ ಸತ್ಕುಲ ಪ್ರಸೂತರು ಅಭಿನಂದಿಸುವರೇ ? ಆದರೂ ತಮ್ಮ ಆಜ್ಞೆಗಾಗಿ ವಿಜ್ಞಾಪಿಸುವೆನು ; ನನ್ನದು ಒಂದೇ ಮಾತು, ವಾರಾಂಗನೆಯರಿಗೆ ಅವರಿವರೆಂಬ ಭೇದವೇ ಇಲ್ಲ, ಈ ನಹುಷನೆಂಬ ವ್ಯಕ್ತಿಗೆ ಆತ್ಮನು ವಿಷ್ಣು, ಅವನೊಬ್ಬ ಜನಕನು ; ದೇಹವನ್ನು ಕೊಟ್ಟವಳು ಇಂದುಮತಿ, ಆದರಿಂದ ಆಯು ಒಬ್ಬ ಜನಕನು ; ಆ ದೇಹವನ್ನು ಪರಿಪೋಷಿಸಿ ಜ್ಞಾನವನ್ನೂ ವಿದ್ಯೆಯನ್ನೂ ಕೊಟ್ಟವರು ವಸಿಷ್ಠರು, ಅವರೊಬ್ಬರು ತಂದೆ ; ಈ ನಹುಷನನ್ನು ಮುಂಡನ ಭಯದಿಂದ ರಕ್ಷಿಸಿ ಕಾಪಾಡಿದವರು ತಾವು, ತಾವೂ ಒಬ್ಬ ತಂದೆಯೇ ; ಒಬ್ಬನೇ ಜನಕನು ನಿಂತು ಮಾಡತಕ್ಕ ಕರ್ತವ್ಯಗಳನ್ನು, ನೀವೆಲ್ಲರೂ ವಿಭಾಗಿಸಿಕೊಂಡು ಮಾಡಿರುವಿರಿ ; ಎಲ್ಲರೂ ಇವನಿಗೆ ಮಾತಾಪಿತೃಗಳೇ. ಆದ್ದರಿಂದ ಸರ್ವರೂ ನಿಂತುಕೊಳ್ಳಿ, ಎಲ್ಲೀ, ಅಶೋಕಸುಂದರಿ, ಮಾಲೆಯನ್ನು ನಿನ್ನ ಪತಿಯಾದ ಈ ನಹುಷನ ಕಂಠದಲ್ಲಿ ಸಮರ್ಪಿಸು—

[ಅಶೋಕಸುಂದರಿ ಮಾಲೆಹಾಕುವಳು—ವಾದ್ಯಗಳಾಗುವವು]

ನಾರದ—ಮಹಾಸಂತೋಷ ! ಈ ದಂಪತಿಗಳು ಚಿರಂಜೀವಿಗಳಾಗಲಿ ! ಎಲ್ಲರೂ ಶ್ರಮಪಟ್ಟು ಈ ನಾರದನ ಲೀಲೆಯನ್ನು ಸಾಂಗವಾಗಿ ನಡೆಸಿದ್ದಕ್ಕಾಗಿ ನಾರದನು ಸರ್ವರಿಗೂ ತುಂಬ ಕೃತಜ್ಞನಾಗಿರುವನು.

ಊರ್ವಶಿ—ಇಷ್ಟು ಲೀಲೆಗಳನ್ನು ತಾವು ನಡೆಸಿದ್ದು ಏತಕ್ಕಾಗಿ ?

ನಾರದ—ಹರಿಗೂ ಹರನಿಗೂ ಇರುವ ಹೆಚ್ಚಾದ ಸಂಬಂಧವನ್ನು ಲೋಕಕ್ಕೆ ತಿಳಿಸುವದಕ್ಕಾಗಿ ; ಶಿವಭಕ್ತರೂ ವಿಷ್ಣುಭಕ್ತರೂ ಮುಂದೆಯಾದರೂ ಮೈತ್ರಿಯನ್ನು ಪಡೆದು ಸಹೋದರರಂತಿದ್ದು ಐಕಮತ್ಯದಿಂದ ಲೋಕಕ್ಕೆ ಮಂಗಳವನ್ನು ಉಂಟುಮಾಡುವ ಬುದ್ಧಿಯನ್ನು ಹೊಂದಲೀ—ಎಂಬುದಕ್ಕಾಗಿ ! ಸರ್ವರಿಗೂ ಹರಿಹರರು ಮಂಗಳವನ್ನು ಕೊಡಲಿ.

ಸರ್ವರೂ—ತಥಾಸ್ತು-ಮಂಗಳಮಸ್ತು—(ಎಲ್ಲರೂ ಮಂಗಳವನ್ನು ಪಾಡುವರು)

——:o:——

ಸಮಾಪ್ತವು